|| ಓಂ ತತ್ಸತ್ ||

ಗೌರೀನಾಥ ಗ್ರಂಥಮಾಲೆಯ ದ್ವಿತೀಯ ಪುಷ್ಪ

# ಸ್ವಾತಂತ್ರ್ಯದ ಅನಾದಿತ್ವ

ಅಥವಾ

## ವೈದಿಕ ತಾಂತ್ರಿಕ ರಹಸ್ಯ



ಗ್ರಂಥಕರ್ತರು –

“ವೀರಶೈವತತ್ವ ವಿಶಾರದ” ಬಿರುದಾಂಕಿತ–ಕಾಬಾಪುರ ಹಿರಿಪುರದ

ಪಂ|| ರಾ. ಗೌರೀನಾಥ ಶಾಸ್ತ್ರಿಗಳು

ಇಲಾಳ

ತಾ ೧೫—೮—೧೯೫_



ಬೆಲೆ ೧—೮—೦

॥ ಓಂ ತತ್ಸತ್ ॥

ಗೌರೀನಾಥ ಗ್ರಂಥಮಾಲೆಯ ದ್ವಿತೀಯ ಪುಷ್ಪ

# ಸ್ವಾತಂತ್ರ್ಯದ ಅನಾದಿತ್ವ

ಅಥವಾ

## ವೈದಿಕ ತಾಂತ್ರಿಕ ರಹಸ್ಯ




ಗ್ರಂಥಕರ್ತರು –

"ವೀರಶೈವತತ್ವ ವಿಶಾರದ" ಬಿರುದಾಂಕಿತ–ಕಾಟಾಪುರ ಹಿರಿಮಠದ

ಪಂ॥ ರಾ. ಗೌರೀನಾಥ ಶಾಸ್ತ್ರಿಗಳು

ಇಲಾಳ



ತಾ. ೧೫—೮—೧೯೫೨





ಬೆಲೆ ೧—೮—೦

# ಸಮರ್ಪಣ ಪತ್ರಿಕೆ

---

ವಿಶ್ವಧರ್ಮವಾದ ವೀರಶೈವದಲ್ಲಿ ವೈದಿಕ ತಾಂತ್ರಿಕಾ (ಸ್ವತಂತ್ರಾ) ಪರ
ಪರ್ಯಾಯವಾದ, ಕರ್ಮಯೋಗ- ಜ್ಞಾನಯೋಗಗಳ
ಮರ್ಮವನು ಷಟ್‌ಸ್ಥಲಾತ್ಮಕವಾಗಿ ಸಮನ್ವಯಗೊಂಡ

**ಶಿವಯೋಗವನ್ನು**

ವರ್ಧನಗೆಯ್ವ ಶ್ರೀಶಿವಯೋಗ ಮಂದಿರದ ಸಂಸ್ಥಾಪಕರೂ,
ಪರಮಪೂಜ್ಯರೂ ಆದ ಲಿಂ ಶ್ರೀ ಮ ನಿ ಪ್ರ

## ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ

**— ಸ್ಮಾರಕವಾಗಿ —**

ಅವರ ದಿವ್ಯಪಾದಂಗಳಿಗೆ " ಶ್ರೀ ಗೌರೀನಾಥ ಗ್ರಂಥಮಾಲೆ " ಯ
ದ್ವಿತೀಯ ಪುಷ್ಪವಾದೀ ಪುಸ್ತಕವು
**ಸದ್‌ಭಕ್ತಿಗಾಣಿಕೆಯಾಗಿ ಸಮರ್ಪಿಸಿದೆ**



ಈ ಗ್ರಂಥಕರ್ತರೂ, “ ವೀರಶೈವ ತತ್ವವಿಶಾರದ ”
ಬಿರುದಾಂಕಿತರೂ ಆದ ಕಾಟಾಪುರ ಹಿರಿಮಠದ
ಪಂ|| ರಾ ಗೌರೀನಾಥ ಶಾಸ್ತ್ರಿಗಳು
ಇಲಾಳ ( ತಾ|| ಹುನಗುಂದ)



ಈ ಗ್ರಂಥದ ಪ್ರಕಾಶಕರೂ,
ಬಾಗಲಕೋಟೆಯ ಪ್ರಸಿದ್ಧ ದಲಾಲರೂ, ಉದಾರಿಗಳೂ ಆದ
ಗುರುಪಾದಪ್ಪನವರು ಶಂಕರಪ್ಪನವರು ಇಲಾಳಶೆಟ್ಟರ
ಇವರು

# ಸಂದೇಶ

ಇಂದಿನ "ಸ್ವತಂತ್ರ ದಿನಾಚರಣೆ"ದ ಮೂಲಕ "ಸ್ವಾತಂತ್ರ್ಯದ ಅನಾದಿತ್ವ"ವು "ಜಾತ್ಯತೀತ" ತತ್ವದ ಸ್ವತಂತ್ರತೆ, ಸಮತೆ, ಬಂಧುತ್ವಗಳೊಡನೆ ಜಗದೆಲ್ಲ ಜನತೆಯಲ್ಲಿ ಚಿರಕಾಲ ಚಿಜ್ಜ್ಯೋತಿಯಾಗಿ ಬೆಳಗಲಿ.

ಲೇ- ವೇ|| ಮೂ|| ಪಂ|| ಉಮಾಪತಿ ಶಾಸ್ತ್ರಿ, ಬಿ ಎ
ಸಂಪಾದಕ "ಸುಕುಮಾರ ಮಾಸಪತ್ರಿಕೆ"
ಶಿವಯೋಗ ಮಂದಿರ
ತಾ|| ೧೫—೮—೧೯೫೨

ಶಿ ಚ ನಂದೀಮಠ, ಎಂ ಎ, ಪಿಎಚ್ ಡಿ, (ಲಂಡನ್)
ಪ್ರಿನ್ಸಿಪಾಲರು, ಬಸವೇಶ್ವರ ಕಾಲೇಜ ಬಾಗಲಕೋಟೆ
ಇವರ

# ಮುನ್ನುಡಿ

---

ಭರತಖಂಡವು ಧರ್ಮಗಳ ಆಗರ ಜೈನ, ಬೌದ್ಧ ಧರ್ಮಗಳಂಥ ಪ್ರಭಾವೀ ಧರ್ಮಗಳು ಇಲ್ಲಿ ಹುಟ್ಟಿ, ಬೆಳೆದು, ಬಹುಕಾಲ ಬಾಳಿರುವವು ವೈದಿಕ ಧರ್ಮವು ಬಲು ಪ್ರಾಚೀನ ಕಾಲದಿಂದ ಇಲ್ಲಿಯೇ ಬೆಳೆದು ಅನೇಕ ಶಾಖೆಗಳಾಗಿ ವ್ಯಾಪಿಸಿರುವದು ಯಹೂದಿ, ಕ್ರೈಸ್ತ, ಮಹಮ್ಮದೀಯ, ಪಾರಸಿಕ ಧರ್ಮಗಳು ಇಲ್ಲಿ ಆಶ್ರಯವನ್ನು ಪಡೆದು ಅನೇಕ ಉಪಾಸಗಳಿಂದ ಭಾರತಮಾತೆಯ ಮಡಿಲಲ್ಲಿ ಬೆಳೆಯುತ್ತಿರುವವು ಇದು ನಿಜವಾಗಿ ಮನನೀಯವಾದುದು ಇದರಿಂದ ಇತರ ದೇಶಗಳಲ್ಲಿ ಕಾಣದಂಥ ಧಾರ್ಮಿಕ ವಿಚಾರ ಸ್ವಾತಂತ್ರ್ಯವೂ, ಆಚಾರ ಸ್ವಾತಂತ್ರ್ಯವೂ ನಮ್ಮ ಈ ಪವಿತ್ರಭೂಮಿಯಲ್ಲಿ ಸಾವಿರಾರು ವರ್ಷಗಳಿಂದ ನಡೆಯುತ್ತ ಬಂದಿವೆಯೆಂಬುದು ಇತಿಹಾಸ ಪ್ರಸಿದ್ಧವಾದ ವಿಷಯ ಆದುದರಿಂದ ಭಾರತೀಯರು ಧರ್ಮದಲ್ಲಿ ಸಮತೋಲನ ಬುದ್ಧಿಯವರಿರುವರೆಂದು ಖ್ಯಾತಿ

ವೈದಿಕ ಧರ್ಮವು ಅತಿ ಪ್ರಾಚೀನವಾದುದು ಆರ್ಯರು ಇದನ್ನು ತಂದರೆಂದು ಕೆಲವರೂ, ಇದು ಇಲ್ಲಿಯೇ ಉದ್ಭವಿಸಿದೆಯೆಂದು ಕೆಲವರೂ ಅಭಿಪ್ರಾಯಪಡುವರು ಇವರ ಈ ವಾದದಲ್ಲಿ ನಾವು ಪ್ರವೇಶಿಸದೆ ಐತಿಹಾಸಿಕ ಯುಗದಿಂದ ಇತ್ತೀಚೆಗೆ ಇದ್ದ ಪರಿಸ್ಥಿತಿಯನ್ನು ನಿರೀಕ್ಷಿಸುವಾ ಐತಿಹಾಸಿಕ ಯುಗವು ಪ್ರಾರಂಭವಾದಾಗ ಅಥವಾ ಅದಕ್ಕೂ ಮೊದಲು ವೈದಿಕ ಧರ್ಮವು ರೂಢಿಯಲ್ಲಿ ಇತ್ತೆಂಬುದು ಕಂಡುಬರುತ್ತದೆ ಮುಂದೆ ಪೌರಾಣಿಕ ಯುಗದಲ್ಲಿ ಇದರಲ್ಲಿ ಅನೇಕ ಅವಾಂತರ ಭೇದಗಳಾದವು ಅವು ತಮ್ಮ ತಮ್ಮ ವೈಶಿಷ್ಟ್ಯವನ್ನು ಸಾರಹತ್ತಿದವು ಆದರೂ ಅವೆಲ್ಲವು

ಸಾಮಾನ್ಯವಾದ ಕೆಲವು ತತ್ವಗಳನ್ನು ಮನ್ನಿಸುತ್ತಿದ್ದವು ಹೊರಗಿನಿಂದ ನೋಡುವವರಿಗ ಈ ಸಾಮಾನ್ಯ ತತ್ವಗಳ ಮೂಲಕ ಅವೆಲ್ಲವು ಒಂದೇ ಧರ್ಮದ ಅಂಗಗಳೆಂದು ಹೊಳೆಯಿತು ಪ್ರಾಚೀನ ಕಾಲದಲ್ಲಿ ಇದ್ದಿರ ಬಹುದಾದ ಅನೇಕ ಧರ್ಮಗಳೂ, ಪಂಥಗಳೂ, ವೈದಿಕ ಧರ್ಮದಲ್ಲಿ ಸಮಾವೇಶವಾದವು ಈ ಎಲ್ಲ ಧರ್ಮಗಳನ್ನೂ ಪಂಥಗಳನ್ನೂ ಒಳಕೊಂಡ ಭಾರತೀಯರ ಧರ್ಮಕ್ಕೆ ಹಿಂದೂ ಧರ್ಮವೆಂದು ಕರೆಯುವರು

ಹಿಂದೂ ಧರ್ಮದ ಪ್ರಮಾಣ ಗ್ರಂಥಗಳು ವೇದಾಗಮಗಳು ವೇದಗಳಿಗೆ ಮಂತ್ರಗಳೆಂದೂ, ಆಗಮಗಳಿಗೆ ತಂತ್ರಗಳೆಂದೂ ಕರೆಯುವರು ಹಿಂದೂ ಧರ್ಮದ ಪ್ರಮುಖ ಅಂಗಗಳಾದ ಶೈವ, ವೈಷ್ಣವ, ಶಾಕ್ತ ಮೊದಲಾದ ಪಂಥಗಳ ಅನುಯಾಯಿಗಳು ವೇದಗಳನ್ನೂ, ಆಗಮಗಳನ್ನೂ ಪ್ರಮಾಣ ಗ್ರಂಥಗಳೆಂದು ಒಪ್ಪುವರು ಅವುಗಳ ಕಾಲ ನಿರ್ಣಯಿಸು ವದು ಕಷ್ಟ ವೇದಗಳ ಕಾಲ ಸುಮಾರು ಮೂರುವರೆ ಸಾವಿರ ವರ್ಷಗಳ ಹಿಂದೆ ಇದ್ದಿರಬೇಕೆಂದು ಇತ್ತಲಾಗಿ ಸಿದ್ಧವಾಗಿದೆ. ಅದಕ್ಕೂ ಹಿಂದ ಇದ್ದ ಕಾಲವನ್ನು ಅನೇಕರು ಅನೇಕ ಪ್ರಕಾರ ತರ್ಕಿಸುತ್ತಿರುವರು ಆಗಮಗಳ ಬಗ್ಗೆ ಸರಿಯಾದ ಸಂಶೋಧನೆ ಇನ್ನೂ ಆಗಿಲ್ಲ ಈಗ ದೊರೆಯುವ ಆಗಮಗಳಲ್ಲಿ ಭಾಷೆ ಅಷ್ಟು ಪ್ರಾಚೀನವಾದುದಲ್ಲ, ವಿಷಯ ಗಳು ಮಾತ್ರ ಪ್ರಾಚೀನವೆಂಬುದನ್ನು ಊಹಿಸಲು ಸಾಧನಗಳಿವೆ. ಕಾಲ ನಿರ್ಣಯ ಮಾಡುವದರಲ್ಲಿ ನಿರತ ಈಗಿನ ಪಂಡಿತರು ಆಗಮಗಳ ಕಾಲ ವನ್ನು ಸುಮಾರು ಎರಡು ಸಾವಿರ ವರ್ಷಗಳ ಹಿಂದೆ ಒಯ್ಯುವರು ಆದುದರಿಂದ ವೇದಗಳೂ, ಆಗಮಗಳೂ, ಪ್ರಮಾಣ ಗ್ರಂಥಗಳೆಂದು ಬಹು ಕಾಲದಿಂದ ಜನರಲ್ಲಿ ಪ್ರತೀತಿಯಿದೆ ಹಿಂದೂಧರ್ಮದ ಬಹುತರ ಎಲ್ಲ ಪ್ರಮುಖ ಪಂಥಗಳು ತಮ್ಮ ತಮ್ಮ ಧರ್ಮತತ್ವಗಳನ್ನು ಪ್ರತಿಪಾದಿ ಸುವ ಆಗಮಗಳುಂಟೆಂದು ನಂಬುವರು ಆಗಮಗಳಲ್ಲಿ ಅನೇಕ ಸ್ವತಂತ್ರ ವಿಚಾರಗಳಿವೆ

" ಸ್ವಾತಂತ್ರ್ಯದ ಅನಾದಿತ್ವ ಅಥವಾ ವೈದಿಕ ತಾಂತ್ರಿಕ ರಹಸ್ಯ " ವೆಂಬ ಈ ಚಿಕ್ಕ ಗ್ರಂಥದಲ್ಲಿ ಪಂಡಿತ ಗೌರೀನಾಥ ಶಾಸ್ತ್ರಿಗಳು ವೇದಾಗಮ

ಗಳಲ್ಲಿಯ ಸ್ವತಂತ್ರ ಸಿದ್ಧಾಂತಗಳನ್ನೂ, ಶೈವಧರ್ಮದ ಅಂಗವಾದ ವೀರಶೈವ ಧರ್ಮವು ಅವುಗಳನ್ನು ಹೇಗೆ ಅಳವಡಿಸಿಕೊಂಡಿದೆಯೆಂಬು ದನ್ನೂ ತೋರಿಸಿ ಕೊಡಲು ಯತ್ನಿಸಿರುವರು ಈ ಪುಸ್ತಕದಲ್ಲಿ ಒಡ-ಮೂಡಿದ ಶ್ರೀ ಶಾಸ್ತ್ರಿಗಳ ವಿಚಾರಸರಣಿಯು ಪರಂಪರಾಗತವಾಗಿದ್ದರೂ ಆಧುನಿಕ ಚಿಕಿತ್ಸಕರಿಗೆ ಸರಿಹೋಲುವಂತಹದು ಆಗಿದೆ ಅವರು ಸಾಧ್ಯ ವಾದಷ್ಟು ತುಲನಾತ್ಮಕ ಮತ್ತು ಚಿಕಿತ್ಸಕ ದೃಷ್ಟಿಯಿಂದ ವಿಷಯ ವಿವೇಚಿ ಸಿರುವರು ಶ್ರೀ ಶಾಸ್ತ್ರಿಗಳಂಥ ವಿದ್ವಾಂಸರು ಹೆಚ್ಚು ಮನಸ್ಸುಹಾಕಿ ಈಗಿನ ಪಾಶ್ಚಾತ್ಯರ ದೃಷ್ಟಿಕೋನವನ್ನು ಕಂಡುಹಿಡಿಯಲು ಯತ್ನಿಸಿದರೆ ನಮ್ಮ ಪ್ರಾಚೀನ ಧಾರ್ಮಿಕ ಗ್ರಂಥ ಭಾಂಡಾರದಿಂದ ಅನೇಕ ವಿಷಯ ಗಳು ಹೊರಬೀಳಬಹುದು ಶ್ರೀ ಗೌರೀನಾಥ ಶಾಸ್ತ್ರಿಗಳ ಪರಿಶ್ರಮ ಮತ್ತು ಅಭ್ಯಾಸ ಸ್ತುತ್ಯವಾದವು ಅವರ ಪರಿಶ್ರಮದ ಫಲವಾದ ಈ ಗ್ರಂಥವನ್ನು ಬಹು ಜನರು ಓದಿ ಲಾಭ ಪಡೆಯಲೆಂದು ಆಶೆ ಶ್ರೀ ಶಾಸ್ತ್ರಿ ಗಳಿಂದ ಇಂತಹ ಉದ್ಗ್ರಂಥಗಳು ಹೆಚ್ಚಾಗಿ ಹೊರಬೀಳಲೆಂದೂ, ಶ್ರೀ ಶಾಸ್ತ್ರಿಗಳವರಿಗೆ ಭಗವಂತನು ಹೆಚ್ಚು ಅನುಕೂಲತೆಗಳನ್ನು ಒದಗಿಸ ಲೆಂದೂ ಪ್ರಾರ್ಥನೆ

ಬಾಗಿಲುಕೋಟೆ

ತಾ ೧೫—೮—೧೯೫೨

ಶ್ರೀ ಜಗದ್ಗುರು ಪಂಡಿತಾರಾಧ್ಯೋ ವಿಜಯತೇ

**ಶ್ರೀ ಗಿರಿರಾಜ ಸೂರ್ಯ ಸಿಂಹಾಸನಾಧೀಶ್ವರ**

ಶ್ರೀ ಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು

**ಶ್ರೀ ಜಗದ್ಗುರು ಶ್ರೀಶೈಲ ಸೂರ್ಯ ಸಿಂಹಾಸನಮಠ**

**ಆತ್ಮಕೂರು** (ಜಿ ಕರ್ನೂಲು) ಗುಂತಕಲ್ಲು (ಜಿ ಅನಂತಪುರ)

— ಇವರ —

# ಪ್ರಸ್ತಾವ ನಿರೂಪಣೆ

—o—

ಇಲಾಳ ಗ್ರಾಮವಾಸಿಗಳಾದ ಕಾಟಾಪುರ ಹಿರೇಮಠದ ವಂ ವೇ ಗೌರೀನಾಥ ಶಾಸ್ತ್ರಿಗಳವರು **"ವೈದಿಕ ತಾಂತ್ರಿಕರಹಸ್ಯ"** ವೆಂಬ ಗ್ರಂಥವನ್ನು ಬರೆದು ವೀರಶೈವರ ವ್ಯಾಪಕತೆಗೆ ಉಪಕಾರ ಮಾಡಿದ್ದಾರೆ

ಅನೇಕ ಪಂಡಿತರಿಗ ತಲೆತಿನ್ನುತ್ತಿದ್ದ **"ವೈದಿಕ ತಾಂತ್ರಿಕ"** **"ಅತ್ಯಾಶ್ರಮಿ"** **"ಅತಿವರ್ಣಾಶ್ರಮಿ"** ಮುಂತಾದ ಸಿದ್ಧಾಂತ ರಮ್ಯಗಳಾದ ಪದಾರ್ಥಗಳನ್ನು ಬಹು ಸಮಂಜಸವಾಗಿ ಬಿಡಿಸಿದ್ದಾರೆ ಈ ಬಿಡಿಸುವಿಕೆಯಲ್ಲಿ ಇವರ ಕೈವಾಡವೇನೂ ಇಲ್ಲದಿರುವುದು ಪ್ರಶಂಸನೀಯ ಪ್ರತಿ ನಿರ್ಣಯಕ್ಕೂ ಪ್ರಮಾಣಗಳನ್ನು ಕೊಟ್ಟು ಮುಂದೆ ಸಾಗಿಸಿರುವರು ಪಂಡಿತ ಪಾಮರರಿಗೂ ಅರ್ಥವಾಗುವಂತೆ ಸರಳ ಶೈಲಿಯಲ್ಲಿ ಸಿದ್ಧಾಂತ ರಹಸ್ಯವನ್ನು ತಿಳಿಸುವುದು, ಬರೆಯುವುದು ಸಣ್ಣಮಾತಲ್ಲ ಅದಕ್ಕೆ ಶಾಸ್ತ್ರಾಭ್ಯಾಸವೂ, ಅನುಭವವೂ ಎರಡೂ ಬೇಕು ಈ ಕಾರ್ಯದಲ್ಲಿ ಶ್ರೀ ಗೌರೀನಾಥ ಪಂಡಿತರು ಅದ್ಭುತವಿಜಯವನ್ನು ಸಂಪಾದಿಸಿದ್ದಾರೆ

ವೀರಶೈವ ಧರ್ಮಶಾಸ್ತ್ರ ತತ್ವಶಾಸ್ತ್ರಗಳನ್ನು ಬಲ್ಲವರು ಬಹುಕಡಿಮೆ ಶ್ರೀ ಗೌರೀನಾಥ ಪಂಡಿತರು ಹಳಬರಾದರೂ ನೂತನ ಜಗತ್ತಿಗೆ ಪುರಾತನ

ಶಾಸ್ತ್ರವನ್ನು ಸಮಂಜಸವಾಗಿ ಹೊಂದಿಸಿ ತೋರಿಸಿ, ಆಧುನಿಕರ ವಕ್ರ-ದೃಷ್ಟಿಯನ್ನು ಸರಿಪಡಿಸುವವರು

ಸರ್ವಸ್ವಾತಂತ್ರ್ಯಕ್ಕೆ ಸಮತಾವಾದವೇ ಅಡಿಗಲ್ಲು ಎಂಬುದು ಈ ಪಂಡಿತರಿಗ ಪೂರ್ಣವಾಗಿ ತಿಳಿದಿದೆ ಯಾರ ಮನಸ್ಸು ಎಲ್ಲಿಯೂ ನೋವಾಗವಂತೆ ಈ ವೀರಶೈವ ಶಾಸ್ತ್ರ ಸಿದ್ಧಾಂತವನ್ನು ನಿರ್ಭಯ-ನಿರ್ಮಾತ್ಸರ್ಯಗಳಿಂದೆ ಸಾರಿದ್ದಾರೆ

ಪರಮತೀಯ ಪಂಡಿತರು ವೀರಶೈವವನ್ನು ಸಂಪೂರ್ಣವಾಗಿ ಅರಿಯಲು ಅವರಿಗಿದು ಕೈದೀವಟಗೆಯಾಗಿದ

ವೀರಶೈವೇತಿಹಾಸವನ್ನು ತಿಳಿಯುವವರಿಗೆ ಇದು ಮಾರ್ಗದರ್ಶಿಯಾಗಿದೆ ವೀರಶೈವ ಸಿದ್ಧಾಂತ ಪ್ರಚಾರಕರಿಗೆ ಇದು ಆಧಾರ ಗ್ರಂಥವಾಗಿದೆ ಎಂದು ವಿವರಿಸಲು ಸಂತೋಷವಾಗುವುದು ಸದರೀ ಪಂಡಿತರು ಈ ಗ್ರಂಥ ರಚನೆಗಾಗಿ ಬಹಳಶ್ರಮಪಟ್ಟಿರುವರು ಅನೇಕ ಪಂಡಿತರನ್ನು ಎರಡು ಮೂರು ವರ್ಷ ಸಂಧಿಸಿ, ಅವರೊಡನೆ ವಿವೇಚಿಸಿ, ವರೆಗೆ ಹಚ್ಚಿ, ಅಮೌಲ್ಯವೆಂದ ಮೇಲೆಯೇ ಈ ಗ್ರಂಥರತ್ನವನ್ನು ಬೆಳಕಿಗೆ ತಂದಿರುವರು.

ಇವರು ಇಂತಹ ಅನೇಕ ಗ್ರಂಥಗಳನ್ನು ಈ ಮುಂದೆಯೂ ರಚಿಸಿ ಧರ್ಮಶಾಸ್ತ್ರ ಸಿದ್ಧಾಂತವನ್ನು ರಕ್ಷಿಸಲೆಂದೂ, ಪರಮಾತ್ಮನು ಇವರಿಗೆ ದೀರ್ಘಾಯುರಾರೋಗ್ಯೈ ಐಶ್ವರ್ಯಗಳನ್ನೂ ಕರುಣಿಸಲೆಂದು ಹಾರೈಸುವೆವು

ಸಮಸ್ತಮತೀಯ ಬಂಧುಗಳು ಈ ಗ್ರಂಥರತ್ನವನ್ನು ಸಂಗ್ರಹಿಸಿ, ಪಠಿಸಿ, ಪಂಡಿತರ ಶ್ರಮವನ್ನು ಸಾರ್ಥಕಗೊಳಿಸಬೇಕೆಂದು ಅಪ್ಪಣೆಕೊಡಿಸಿರುವೆವು

—ಇತ್ಯಾಶಿಷಃ

ತಾ|| ೧೫—೮—೧೯೫೨

‡ ಶ್ರೀ ಮಹಾಂತೇಶ ಪ್ರಸೀದ ‡

ಶಿವಾನುಭವಚರವರ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ

# ಶ್ರೀಮಹಾಂತಸ್ವಾಮಿಗಳು ವಿರಕ್ತಮಠ,

## ಇಲಕಲ್ಲ-ಚಿತ್ತರಗಿ

— ಇವರ —

# ಪ್ರಸ್ತಾವ ನಿರೂಪಣೆ

—o—

ಆತ್ಮಸಾಕ್ಷಾತ್ಕಾರವೆಂಬ ಶಾಶ್ವತ ಸುಖವನ್ನು ಅನುಭವಿಸುವುದು ಮನುಷ್ಯನ ಅಂತಿಮ ಧ್ಯೇಯವಾಗಿದೆ ಆ ಧ್ಯೇಯದ ಕಡೆಗೆ ಕ್ರಮಬದ್ಧ ರೀತಿಯಲ್ಲಿ ಕರೆದೊಯ್ಯುವ ಯಾವ ಪದ್ಧತಿಯಾದರೂ ಧರ್ಮವೆನಿಸುವುದು ಇದಕ್ಕಾಗಿಯೇ ಮನುಷ್ಯನಿಗೆ ಧರ್ಮವು ಬೇಕು ಒಬ್ಬನಿಗೆ " ದಯವೇ ಧರ್ಮದ ಮೂಲ"ವಾದರೆ, ಇನ್ನೊಬ್ಬನಿಗೆ " ಆಚಾರವೇ ಪ್ರಥಮ ಧರ್ಮ" ವಾಗುವುದು, ಮತ್ತೊಬ್ಬನಿಗೆ " ಸತ್ಯವೇ ಧರ್ಮ " ವಾದರೆ ಬೇರೊಬ್ಬನಿಗೆ " ಅಚಿಂತ್ಯ-ಅಜ್ಞೇಯ ತತ್ತ್ವವೇ ಧರ್ಮ "ವಾಗುವುದು ಮಾನವನ ದೃಷ್ಟಿಕೋನವು ಬದಲಾಯಿಸಿದಂತೆ, ಧರ್ಮವು ಹಲವು ತೆರನಾಯ್ತು, ಅದರಂತ ಧರ್ಮಸಾಧನೆಯ ಗುರಿಯೂ ಹಲವು ತೆರನಾಯ್ತು ಆದರೂ, ಧರ್ಮದ ಸ್ವರೂಪವು ಒಂದೇ ಆಗಿದೆ ಕಾಲಾಂತರದಲ್ಲಿ ಧರ್ಮವು ಕುಲ-ಪಂಥ, ಪಕ್ಷ-ಪಂಗಡ, ಜಾತಿ–ಮತಗಳಲ್ಲಿ ಇಳಿದುದೇ, ಭಾರತದ ನೈತಿಕ ಅಧಃಪಾತಕ್ಕೆ ಮುಖ್ಯ ಕಾರಣವಾಗಿದೆ ಈ ಅಧಃಪಾತವನ್ನು ಅಳಿಸುವ ಆಸೆಯಿಂದಲೇ, ಇದೀಗ ಸ್ವತಂತ್ರ ಭಾರತವನ್ನಾಳುವ "ಕಾಂಗ್ರೆಸು ಸರಕಾರ " ದವರು ಜಾತೀಯತೆಯ ಹೆಮ್ಮರವನ್ನು ಬೇರ್ವೆರಸಿ ಕಿತ್ತೊಗೆಯಲು ಸಮರ್ಥವಾದ "ರಾಷ್ಟ್ರಧರ್ಮ"ವೊಂದನ್ನು ಸಂಸ್ಥಾಪಿಸುವುದಕ್ಕೆ ಹಗಲಿರುಳು ಹವಣಿಸು-ರುವರಷ್ಟೆ? ಇಂತಹ "ರಾಷ್ಟ್ರಧರ್ಮ"ಕ್ಕೆ ಅತ್ಯಂತ ಪೋಷಕವಾಗಿರುವ ಭಾರ

ತವ ಧರ್ಮಗಳಲ್ಲಿ "ವೀರಶೈವ"ವು ಮೇಲ್ಮಟ್ಟವನ್ನು ಮುಟ್ಟಬಲ್ಲುದು, ಅಂತೆಯೆ, ಜಾತ್ಯತೀತ ರಾಷ್ಟ್ರಕ್ಕೆ ವೀರಶೈವ ಧರ್ಮವು ಚಾಚೂ ತಪ್ಪದೆ ಹೊಂದಿಕೊಳ್ಳುತ್ತಿದೆ

ವೀರಶೈವ ಧರ್ಮಕ್ಕೆ ಸಂಧಿಕಾಲವೊದಗಿದೆ ವೀರಶೈವಾಕಾಶಕ್ಕೆ ಮತ್ತೆ ಧರ್ಮಗ್ಲಾನಿಯ ಕರ್ಮೋಡಗಳು ಮುತ್ತಿವೆ, ವೀರಶೈವವು ಸಂಘಟನಾಚಾರಗಳ ಅಭಾವದಿಂದ ಕುಲ-ಜಾತಿಗಳ ಕೀಳ್ಮಟ್ಟದಲ್ಲಿ ಇಳಿಯಹತ್ತಿದೆ ಇದನ್ನು ಮನದಂದು, ಮುಖಂಡರು ಮುಂದಾಗಿ ಬಂದು, "ಮುಂದೇನು" ಎಂಬ ಸಮಸ್ಯೆಯನ್ನು ಮುಂಚೆ ಬಿಡಿಸಬೇಕಾಗಿದೆ ಅನಾದಿಕಾಲದಿಂದ ಬಂದ ನಮ್ಮ ಧರ್ಮ- ಸಂಸ್ಕೃತಿ- ತತ್ತ್ವಗಳ ಪರಿಪಾಲನೆ ಮಾಡಬೇಕಾಗಿದೆ ಧರ್ಮ ಜಾಗೃತಿಗೋಸ್ಕರ ಅಖಂಡ ಪ್ರಚಾರ ಕಾರ್ಯವು ನಡೆಯುವುದು ಅತ್ಯಾವಶ್ಯಕವಲ್ಲವೆ? ಇಂತಹ ಪ್ರಚಾರ ಸಾಧನಗಳಲ್ಲಿ ಧಾರ್ಮಿಕ ಲೇಖನ ಬರೆಯುವುದೂ ಒಂದಾಗಿವೆ ವೀರಶೈವ ಧರ್ಮವನ್ನು ವಿಮರ್ಶಾತ್ಮಕವಾಗಿ ಪ್ರತಿಪಾದಿಸುವ ಗ್ರಂಥಗಳು ಕನ್ನಡದಲ್ಲಿ ಸಾಕಷ್ಟಿಲ್ಲ ಅದರಲ್ಲೂ, "ವೀರಶೈವದ ಸ್ವಾತಂತ್ರ್ಯದ ಅನಾದಿತ್ವ"ದೊಂದಿಗೆ, "ವೈದಿಕ ತಾಂತ್ರಿಕ ರಹಸ್ಯ"ವನ್ನು ಸಂಕ್ಷೇಪವಾಗಿ— ಸರಸವಾಗಿ— ಸಾಧಾರವಾಗಿ ಚಿತ್ರಿಸುವ ಹೊತ್ತಿಗೆಗಳು ತೀರವಿರಳವಾಗಿವೆ. ಈ ಕೊರತೆಯನ್ನು ಶಕ್ಯವಾದಷ್ಟು ನಿವಾರಿಸಲು, ಪಂಡಿತ ಶ್ರೀಗೌರೀನಾಥ ಶಾಸ್ತ್ರಿಗಳು ಇಲಾಳ ಇವರು ಈ ಚಿಕ್ಕ ಹೊತ್ತಿಗೆಯನ್ನು ಹೆಣೆದು, ವೀರಶೈವ ಪ್ರಪಂಚದ ಮುಂದಿಟ್ಟುದುದು ತಾನೆ ಹೆಮ್ಮೆಯ ಮಾತೇ ಸರಿ

"ಗಾತ್ರ ಕಿರಿದು, ಸೂತ್ರ ಹಿರಿದು" ಎಂಬಂತೆ, ಶಾಸ್ತ್ರಿಗಳ ಗ್ರಂಥವಾಗಿದೆ ಇದೊಂದು ವಿಮರ್ಶೆ, ಆಧಾರಗ್ರಂಥ ಇದರಲ್ಲಿ ಶಾಸ್ತ್ರಿಗಳು ತಮ್ಮ ಸಂಸ್ಕೃತ ಪಾಂಡಿತ್ಯ, ಸತತ ಪರಿಶ್ರಮ, ವಿಮರ್ಶನ ಶಕ್ತಿ, ಹಾಗು ಧರ್ಮಾಭಿಮಾನಗಳನ್ನು ಚೆನ್ನಾಗಿ ಮೂಡಿಸಿದ್ದಾರೆ ಅವರು ಸುಮಾರು ೫೦ ಉದ್ಗ್ರಂಥಗಳನ್ನು ಪರಿಶೀಲಿಸಿ, ಅಜಮಾಸು ೧೪೦ ಅಮೌಲ್ಯ ಆಧಾರಗಳನ್ನು ಆಯ್ದು ಕ್ರಮಗೊಳಿಸಿ, ಬಲು ಅಚ್ಚುಕಟ್ಟನಿಂದ ತಮ್ಮ ವಿಚಾರ ಸರಣಿಯನ್ನು ಮಂಡಿಸಿದ್ದಾರೆ ಸಂಸ್ಕೃತ ಶ್ಲೋಕಗಳನ್ನೇ ಬಹಳಮಟ್ಟಿಗೆ

ಆಧಾರವಾಗಿರಿಸಿಕೊಂಡರೂ, ಅವರು ಅಲ್ಲಲ್ಲಿ ಕನ್ನಡ ಇಂಗ್ಲೀಷ- ಹಿಂದಿ ಅವತರಣಿಕೆಗಳಿಗೂ ಇದರಲ್ಲಿ ಒಟ್ಟಿಗೆ ೧೨ ಪ್ರಕರಣ ಮಾಡಬಹುದು ೧, ೨ರಲ್ಲಿ ಲಘು ಪ್ರಸ್ತಾವನೆ ಸಹಿತವಾಗಿ, ಶಿವಾಗಮ ಪ್ರಶಸ್ತಿಯನ್ನು ಘಂಟಾಘೋಷವಾಗಿ ಹೇಳಿ, ೩ರಲ್ಲಿ ಆಗಮಕಾಲವನ್ನು ಸರಿಯಾಗಿ ತೂಗಿ ನೋಡಿ, ೪–೮ರಲ್ಲಿ ಆಗಮೋಕ್ತ ವೀರಶೈವವನ್ನು ಸೂಕ್ಷ್ಮವಾಗಿ ವಿವರಿಸಿ, ೯ರಲ್ಲಿ ವೀರಶೈವವು ಕನ್ನಡ ಸಾಹಿತ್ಯಾನುಭಾವದಲ್ಲೂ ಒಡಮು ಕಾಣುತ್ತಿದೆ ಎಂಬುದನ್ನು ಸೋದಾಹರಣವಾಗಿ ತಿಳಿಸಿ, ೧೦ರಲ್ಲಿ ವೀರಶೈವ ದ್ವೈವಿಧ್ಯವನ್ನು ಪರ್ಯಾಯವಾಗಿ ಸೂಚಿಸಿ, ೧೧ರಲ್ಲಿ "ವೈದಿಕ ತಾಂತ್ರಿಕ ರಹಸ್ಯ" ವನ್ನು ಒಟ್ಟಾಗಿ ವಿವೇಚಿಸಿ, ೧೨ರಲ್ಲಿ "ಉಪಸಂಹಾರ" ರೂಪದಲ್ಲಿ, ಶಾಸ್ತ್ರಿಗಳು ತಮ್ಮ ಗ್ರಂಥಕ್ಕೆ ತಲೆಬರೆಹವು ಸಾರ್ಥಕವಾದ ರೀತಿಯನ್ನು ಮಾರ್ಮಿಕವಾಗಿ ನಿರೂಪಿಸಿದ್ದಾರೆ

ಶಾಸ್ತ್ರಿಗಳು ಈ ಗ್ರಂಥದಲ್ಲಿ ಪ್ರಬಲಾಧಾರಗಳ ಮೂಲಕ 'ವೀರಶೈವ'ದ ಒಗೆಗ ಹಲವಾರು ಸಂಗತಿಗಳನ್ನು 'ಸಿದ್ಧಾಂತ'ವೆಂಬಂತೆ, ಹೃದಯಂಗಮವಾಗಿ ಚರ್ಚಿಸಿದ್ದಾರೆ ಅವುಗಳಲ್ಲಿ ಕೆಲವನ್ನು ಹೇಳಬೇಕೆಂದರೆ, ವೇದಗಳಿಗಿಂತ ಆಗಮಗಳು ಸ್ಪಷ್ಟೋಚ್ಚಾರವುಳ್ಳವಾಗಿವೆ ಆಗಮಗಳು ಉಪನಿಷತ್ತುಗಳಲ್ಲಿ ಕೆಲವಕ್ಕೆ ಮೂಲಾಧಾರವಾಗಿವೆ ಆಗಮಗಳಿಂದ ವೀರಶೈವದ ಉಗಮವಾಗಿದೆ. ವೇದಾಗಮಗಳ ಕರ್ತನು ಶಿವನೊಬ್ಬನೇ ಇದ್ದಾನೆ ಆಗಮಕಾಲವು ಪುರಾಣ, ಮಹಾಭಾರತ, ಸ್ಮೃತಿ, ಉಪನಿಷತ್ತುಗಳ ಕಾಲಕ್ಕಿಂತ ಮುಂಚಿನದಾಗಿದ್ದು, ಅನಾದಿಯಾದ ವೇದಕಾಲವಾವುದೋ, ಅದೇ ಆಗಮಕಾಲವಾಗಿದೆ ಆದ್ಯ ಶಂಕರಾಚಾರ್ಯರು ಶಿವಾಗಮವನ್ನೇ ಆಧಾರವಾಗಿಟ್ಟುಕೊಂಡು, ಗ್ರಂಥರಚನೆ ಮಾಡಿದರು ಆಗಮಗಳು ಶ್ರೌತ-ಸ್ವತಂತ್ರವೆಂದು ದ್ವಿವಿಧವಾದರೂ ವೈದಿಕವೇ ಆಗಿವೆ ಶಕ್ತಿ ವಿಶಿಷ್ಟಾದ್ವೈತವನ್ನು ಬೋಧಿಸುವ ವೀರಶೈವವು ಶೈವಾಂತರ್ಗತವಾದರೂ, ಶೈವಮತೋತ್ತಮವಾಗಿ— "ತಾಂತ್ರಿಕ ವೈದಿಕ" ವೆಂಬುದಾಗಿ ಪ್ರಸಿದ್ಧವಿದೆ 'ಶಿವಬ್ರಾಹ್ಮಣ, ವೀರಶೈವ ಬ್ರಾಹ್ಮಣ' ,ಎಂಬ ಪದಗಳ ಉಲ್ಲೇಖಗಳು ವಿಪುಲವಾಗಿವೆ ಸರ್ವಮಾನ್ಯ–ಮಹತ್ತರ ತತ್ತ್ವ

ಮಯ 'ಭಗವದ್ಗೀತೆ'ಯು ಶೈವಾಗಮಗಳಿಂದ ಹುಟ್ಟಿರುವುದು ಕನ್ನಡ ವೀರಶೈವಾಮೃತ ಮಹಾ ಪುರಾಣವು ವೀರಶೈವ ಧರ್ಮದ ಜ್ಞಾನಕೋಶ-ವಾಗಿದೆ ವೇದಾಗಮಗಳೆರಡೂ ದ್ವಿದಲಧಾನ್ಯದಂತೆ, ನಾಣ್ಯದ ಇಮ್ಮೈ ಯಂತೆ, ಶೃತಿ ಶಬ್ದದಲ್ಲಿ ಆವಿರ್ಭಾವ ಹೊಂದುವುವು ಶ್ರೌತ-ಸ್ವತಂತ್ರ-ದಿಂದ ವೈದಿಕ ತಾಂತ್ರಿಕದ ವರೆಗಿರುವ ಪರ್ಯಾಯ ವಿಭೇದವು ವೀರಶೈವರ ಸಾಧಕ ದಶೆಯನ್ನೇ ಹೇಳುತ್ತಿದೆ, ಆದರೆ, ಸಿದ್ಧ ದಶೆಯಲ್ಲಿ ಈ ವಿಭೇದವು ಅಳಿದು ಹೋಗುವದು

ವೀರಶೈವವು 'ವಿಶ್ವಧರ್ಮವಾಗಲು ಅರ್ಹವಾಗಿದೆಯೆಂದು ಪರ್ಯಾಲೋಚಿಸುವುದು ತಾನೆ ಈ ಗ್ರಂಥದ ವೈಶಿಷ್ಟ್ಯವಾಗಿದೆ ಹೇಗೆಂದರೆ, ವೀರಶೈವವು ವೇದಾಗಮಗಳಿಗೆ ಸಮ್ಮತವಾಗಿದೆ ಅದು ಅನಾದಿಕಾಲದಿಂದ ಧರ್ಮ ಸ್ವಾತಂತ್ರ್ಯದ ಕಹಳೆಯನ್ನೂದುತ್ತ ಬಂದಿದೆ, "ಭಕ್ತಿಮಾತ್ರ ಪವಿತ್ರಾ ಹಿ ಸರ್ವ ಏವಾಧಿಕಾರಿಣಃ " ಎಂಬಂತೆ, ಗುರುಕಾರುಣ್ಯ ರೂಪದೀಕ್ಷೆಯಿಂದ ಭಕ್ತರಾಗಿ, ಈ ಧರ್ಮದಲ್ಲಿ ಸಮಾನಾಧಿಕಾರಿಗಳಾಗಲು ಸರ್ವರಿಗೂ ಸ್ವಾಗತವಿದೆ, ಅದರಲ್ಲಿ ಶೂದ್ರತೆಗೆ ಎಳ್ಳಷ್ಟು ಇಂಬಿಲ್ಲ ಸ್ತ್ರೀಯರಿಗೂ ಆತ್ಮಬಲ ಬೆಳೆಸಿಕೊಳ್ಳಲು ಅವಕಾಶವುಂಟು ಅದರಲ್ಲಿ ಉಚ್ಛಿಷ್ಟ– ಸೂತಕ ಯಜ್ಞ ಯಾಗಾದಿಗಳ ಗೊಂದಲವಿಲ್ಲ ಮೇಲು ಕೀಳುಗಳ ಪ್ರಶ್ನೆವಿಲ್ಲ ಕನ್ನ-ಡದ ಉಪನಿಷತ್ತು' ಎಂದು ಹೆಸರಾದ ' ವಚನ ಶಾಸ್ತ್ರವು ' ವೀರಶೈವ ಧರ್ಮದಲ್ಲಿ ಎದ್ದುಕಾಣುತ್ತಿದೆ ಒಟ್ಟಾರೆ, ಭಕ್ತಿ-ಜ್ಞಾನ ವೈರಾಗ್ಯಗಳ ತ್ರಿವೇಣೀ ಸಂಗಮದಲ್ಲಿ ಮಿಂದು ಷಟ್‌ಸ್ಥಲಾಮೃತವುಂಡು, ಸ್ವತಂತ್ರತೆ ಸಹೋದರತೆ ಸಮಾನತೆಗಳ ತೀರ್ಥಕುಡಿದು, ವೀರಶೈವವು ಪವಿತ್ರತಮ-ವಾಗಿದೆಯೆಂಬುದನ್ನು ಶಾಸ್ತ್ರಿಗಳು ಸುಂದರವಾಗಿ ಹೇಳಿದ್ದಾರೆ

ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವೆಂದರೆ ವೇದವ್ಯಾಸಮಹರ್ಷಿ ಶಂಕರಾಚಾರ್ಯ, ಸೂರ್ಯಭಟ್ಟ, ಮಾಧವಾಚಾರ್ಯ, ಚಿಂತಾಹರಣ ಚಕ್ರವರ್ತಿ, ಎಂ ಆರ್ ಶ್ರೀನಿವಾಸಮೂರ್ತಿ, ಎಸ್ ರಾಧಾಕೃಷ್ಣನ್ ಮುಂತಾದ ವಿಜಾತೀಯ ಮಹಾಶಯರ ಅಭಿಪ್ರಾಯಗಳನ್ನು ಶೇಖರಿಸಿ, ಶಾಸ್ತ್ರೋಕ್ತ ವಾಗಿ ವೀರಶೈವ ಧರ್ಮದ ಮೇಲೆ ಪ್ರತಿಪಾದನೆಮಾಡಿ, ಸ್ವಲ್ಪದರಲ್ಲೆ

ಸ್ವಾರಸ್ಯವನ್ನು ಶಾಸ್ತ್ರಿಗಳು ನೀಡಿದ್ದಾರೆ ವೀರಶೈವರೆಲ್ಲರು ತಮ್ಮ ಧರ್ಮದ ಮಹತಿಯನ್ನು ಮನವರಿಕೆಮಾಡಿಕೊಂಡು, ಇನ್ನಾದರೂ ಕಣ್ದೆರೆದು, ಪರ ಧರ್ಮ ಸಹಿಷ್ಣುವಾಗಿ ಸ್ವಧರ್ಮನಿಷ್ಠರಾಗಲು ಮನಃಪೂರ್ವಕ ಪ್ರಯತ್ನ-ಗೈದರೆ, ಶಾಸ್ತ್ರಿಗಳ ಶ್ರಮದ ಸಾರ್ಥಕ್ಯವಾದೀತೆಂದು ಹಾರಯಿಸಿರುವೆವು ಶಾಸ್ತ್ರಿಗಳ ಪಳಗಿದ ಲೇಖನಿಯಿಂದ ಇನ್ನೂ ಇಂತಹ ಧರ್ಮಗ್ರಂಥಗಳು ಹೊರಹೊಮ್ಮಲಿ ! ವೀರಶೈವರಲ್ಲಿ ನವಚೈತನ್ಯವುಂಟಾಗಲಿ !!

ಇತ್ಯಾಶಿಷಃ ದಿ ೧೫—೮—೧೯೫೨



# ಗ್ರಂಥಕರ್ತನ ಮೊದಲ್ನುಡಿ

ನಮ್ಮ ಭಾರತದಲ್ಲಿ– ಭಾರತೀಯ ಧರ್ಮಗಳೊಳಗೆ ಏಕೈಕವಾದ ವೀರಶೈವವು ಅನಾದಿಯಾಗಿದ್ದು, ಅದರ ಕಾಲಗಣನೆಯನ್ನು ಮಾಡುತ್ತ ಹೋದಲ್ಲಿ, ಇತಿಹಾಸಕರ್ತರಿಗೆ ಅದರ ನೆಲೆಯೇ ಹತ್ತದಂತಾಗಿದೆ ಅಲ್ಲದೆ ಪರಿಶೋಧನೆಮಾಡಿದಷ್ಟು ಅವರಿಗೆ ಅದು ಮತ್ತೆ ಮತ್ತೆ ಹಳೆಯದಾಗುತ್ತ ನಡದಿದೆ

'ಹರಪ್ಪಾ' 'ಮೋಹೆಂಜೋದಾರೋ' ಸ್ಥಳಗಳಲ್ಲಿ ದೊರೆತ ಅವಶೇಷ ಗಳಲ್ಲಿ— ವೀರಶೈವರು ಧರಿಸುವಂತಹ ಕಂಥೆ ಧರಿಸಿದ ಲಿಂಗವೊಂದು ದೊರೆತು, ಮೈಸೂರ ಗವರ್ನ್ಮೆಂಟ ಶಾಖೆಯವರಿಂದ ಪ್ರದರ್ಶನಕ್ಕೆ ಬಂದುದನ್ನು, " ಡಾ॥ ಅಣ್ಣಾಜಪ್ಪ ಪ್ರೊಪ್ರಾಯಿಟರ್ ಮಾಡರ್ನ ಫಾರ್ಮಸಿ ಮೈಸೂರ " ಇವರು "ಅನಾದಿ ವೀರಶೈವ ಸಂಗ್ರಹ"ದಲ್ಲಿ ತಿಳಿಸುತ್ತಾರೆ

ಇದರಿಂದ ಇತಿಹಾಸ ಕಾಲಕ್ಕಿಂತ ಪ್ರಾಚೀನವಾದ 'ಪ್ರಾಗೈತಿಹಾಸಿಕ' ಕಾಲದಿಂದಲೂ, ವೀರಶೈವವು ರಾರಾಜಿಸುತ್ತ ಬಂದಿದೆ ಎಂಬುದು, ಇಂತಹ ಹಲವು ಕಾರಣಗಳಿಂದಲೂ ಬಹು ಸ್ಪಷ್ಟವಾಗಿ ತಿಳಿಯುತ್ತಿದೆ.

ಮತ್ತು ವೀರಶೈವದಲ್ಲಿ ಪ್ರವಿಷ್ಟವಾದ ಜಗತ್ತಿನ ಜನತೆಗೆಲ್ಲ ದೊರೆಯುವ 'ಸ್ವಾತಂತ್ರ್ಯ'ವು ಅನಾದಿಸಿದ್ಧವಾದುದರಿಂದ ಈ ಗ್ರಂಥಕ್ಕೆ 'ಸ್ವಾತಂತ್ರ್ಯದ ಅನಾದಿತ್ವ'ವೆಂದು ಹೆಸರನ್ನು ಕೊಟ್ಟಿದೆ ಅಲ್ಲದೆ, ಇದರ ಬರವಣಿಗಯ ಉಪಕ್ರಮವು ಇದರ ಇದೇ ಮೊದಲನೆಯ ಮತ್ತು ಎರಡನೆಯ ಪುಟಗಳಲ್ಲಿ ಸ್ಫುಟವಾಗಿ ತೋರಿಸಲ್ಪಟ್ಟಿದೆ

ನಾನು ಕೆಲದಿನಗಳಹಿಂದೆ 'ವೀರಶೈವ ಶುದ್ಧೀಕರಣ'ವೆಂಬುದೊಂದು ಗ್ರಂಥವನ್ನು ಬರೆದು ಸಮಾಜ ಸೇವೆಗೈದುದು ಸರಿಯಷ್ಟೇ !

ಆದರಲ್ಲಿ– ವೀರಶೈವ ಸಾಧಕವರ್ಗಪರಿತವಾದ ‘ ವೈದಿಕ, ತಾಂತ್ರಿಕ’ ವಿಭಾಗವನ್ನು ಹೇಳಿವದೂ, ಹೆಚ್ಚಾಗಿ ‘ತಾಂತ್ರಿಕ’ ವಿಭಾಗವು ಉಕ್ತವಾಗಿ ‘ವೈದಿಕ’ವು ಸಂಕ್ಷೇಪಗೊಂಡಿದೆ ಹಾಗು ‘ವೈದಿಕ, ತಾಂತ್ರಿಕ’ ವಿವರಣೆಯು ಸ್ಪಷ್ಟಗೊಂಡಿಲ್ಲ

ಆದರೆ ವೀರಶೈವದ ಉಗಮಸ್ಥಾನವಾದ ಶಿವಾಗಮಗಳಲ್ಲಿ– ಪ್ರಸಿದ್ಧವಾದ ಕ್ರಿಯಾಚರ್ಯಾದಿಪಾದಗಳನ್ನರಿಯದೇ ಹೋದರೆ, ವೈದಿಕ ತಾಂತ್ರಿಕ ರೂಪವೂ, ಪರಿಪೂರ್ಣವೂ ಆದ ವೀರಶೈವದ ನಿಜಜ್ಞಾನವಾಗಲಾರದೆಂಬುದು ಬಲ್ಲವರಾದ ಎಲ್ಲ ವೀರಶೈವರಿಗೂ ತಿಳಿದ ವಿಷಯವಾಗಿದೆ ಅದು ಕಾರಣ ವೈದಿಕರಾರು? ತಾಂತ್ರಿಕರಂದರಾರು? ಇವರುಗಳಲ್ಲಿರುವ ರಹಸ್ಯವೇನು ? ಎಂಬುದಕ್ಕೆ ‘ ವೈದಿಕ ತಾಂತ್ರಿಕ’ವೆಂದು ಈ ಗ್ರಂಥಕ್ಕೆ ಮತ್ತೊಂದು ನಾಮಕರಣವೂ ಮಾಡಲ್ಪಟ್ಟಿದೆ

ಒಟ್ಟಾರೆ ಹೇಳಬೇಕೆಂದರೆ–– “ ವೈದಿಕ ” ವೆಂಬುದು, ಒಂದು ಪರಂಪರಾಗತ ಸಂಪ್ರದಾಯ ವಿಶೇಷವಾಗಿದ್ದು, ನೇರವಾಗಿ ವೀರಶೈವದ ಹಿನ್ನೆಲೆಯನ್ನು ಐತಿಹಾಸಿಕವಾಗಿ ತಿಳಿಯಲು ಮತ್ತು ತಿಳಿಸಲು ಅದು ಬಹು ಉಪಯುಕ್ತಗೊಂಡಿದೆ ‘ತಾಂತ್ರಿಕ’ವೆಂಬುದಾದರೂ ಪ್ರಾಚೀನವಾಗಿದ್ದು ಅದು ಅಸಾಂಪ್ರದಾಯಿಕವಾಗಿದೆ ಮತ್ತು ವಿಶ್ವದ ಮಾನವರನ್ನೇ ಉದ್ಧರಿಸಲು ಉದ್ಭೂತವಾದ ಸರ್ವಲೋಕೋಪಕಾರಕ ಧರ್ಮವು ಅದಾಗಿದೆ ಆದುದರಿಂದ ಅದರ ಬಗೆಗೆ ಇಲ್ಲಿ ೩೫ನೆಯ ಪುಟದಿಂದ ೪೦ ರ ವರೆಗೆ ತೋರಿಸಿ ಇದೆ

ಮೇಲ್ಕಂಡ ವೈದಿಕರಲ್ಲಿ–– ಅಪ್ರಾಕೃತ ವರ್ಣಾಶ್ರಮ ವಿಭಾಗವು ತೋರಿ ಬರುತ್ತಿದೆ ಶಿವೋಕ್ತವಾದುದರಿಂದ ಹೇಗೆ ? – ಅದು ಪ್ರಾಮಾಣ್ಯವೋ ಹಾಗಯೇ ತತ್ಪರಿತ್ಯಾಗವೂ ಕೂಡ ಶಿವೋಕ್ತವಾದುದರಿಂದ ಪ್ರಾಮಾಣ್ಯವಾಗಿದೆ

ಆದರೆ ‘ತಾಂತ್ರಿ’ಕರಲ್ಲಿ ಇಂತಹ ವರ್ಣಾಶ್ರಮಗಳೆ ಗೊಂದಲವಿಲ್ಲವೆಂದು ಸುಸ್ಪಷ್ಟವಾಗುವುದರಿಂದ ಸಾಧಕ ಮತ್ತು ಸಿದ್ಧದೆಶೆಯಲ್ಲಿಯೂ

ಸರ್ವಸಾಮಾನ್ಯವಾಗಿ ಅವರು ' ಜಾತ್ಯತೀತ ' ರೆಂಬುದು ಸರಿಯಾದ ಮಾತಾಗಿದೆ

ವಸ್ತುತಃ ವೈದಿಕರೇ ಇರಲಿ, ತಾಂತ್ರಿಕರೇ ಇರಲಿ ಪೂರ್ಣ ಶಿವ-ಜ್ಞಾನಿಗಳಾದಾಗ, 'ಜಾತ್ಯತೀತರೆಂಬುದು ನಿರ್ವಿವಾದವು ಆದುಕಾರಣ 'ಸ್ವಾತಂತ್ರ್ಯ' 'ಸಮತೆ' 'ಬಂಧುತ್ವ'ಗಳೊಡನೆ 'ಜಾತ್ಯತೀತ' ವರ್ತನ-ವನ್ನು ವೀರಶೈವ ವಿಜ್ಞಾನಿಗಳಲ್ಲಿ ಬೇರೆ ಹುಡುಕಲಿಕ್ಕೆ ಸಾಕು. ಆದುದ-ರಿಂದ ಸಕಲ ಜೀವಾತ್ಮರಿಗೆ ಲೇಸನೇ ಬಯಸುವ, ಗುಣಗಳು ವೀರಶೈವ ರಲ್ಲಿ ಕಡಿಮೆ ಇಲ್ಲ

ಜಾತೀಯತೆಯ ಭೂತವನ್ನು ಹೊಡೆದೋಡಿಸಲು ಟೊಂಕ ಕಟ್ಟಿದ ಭಾರತೀಯ ಧರ್ಮಾಗ್ರೇಸರವೆಂದರೆ–ವೀರಶೈವವೊಂದೇ ಆಗಿದೆ ಎಂಬುದು ಹೊಸಮಾತಲ್ಲ 'ಜಾತ್ಯತೀತ, ವರ್ತನವು ಅದರ ಪರಿಶುದ್ಧವಾದ ಸಿದ್ಧಾಂತವು ಆದಕಾರಣ ಚರ್ಯಾಪಾದದಲ್ಲಿ– ಅಂದರೆ ವೀರಶೈವ ಸಾಧಕ ದಶೆ-ಯಲ್ಲಿ ವರ್ಣತ್ರಯಾತ್ಮಕ ಜಾತಿವಾದವು ' ಶ್ರೌತ ' ವರ್ಗ ಪರಿತವಾಗಿ, ಪರಶಿವಾಭಿಹಿತವಾಗಿದ್ದರೂ ಜಾತಿಯ ಅನುವರ್ತನೆಯಂತೆ ಅದರ ಅತಿ ಕ್ರಮಣವೂ ಕೂಡ 'ಅತ್ಯಾಶ್ರಮ'ದ ಮುಖ್ಯ ಲಕ್ಷಣವೆಂಬುದನ್ನು ಮರೆ-ಯುವಂತಿಲ್ಲ

ಇನ್ನು ವೀರಶೈವದಲ್ಲಿ– 'ತಾಂತ್ರಿಕ'ರೂ 'ಅತ್ಯಾಶ್ರಮಿ, ಪದವಾಚ್ಯರು ಅಹುದು ಆದುಕಾರಣ– ಏತನ್ಮತಪ್ರವಿಷ್ಟರಾದ ಬ್ರಾಹ್ಮಣಾದಿಗಳ ಆ– ಪ್ರಾಕೃತ ವರ್ಣಾಶ್ರಮಗಳ ಸುಳಿವೇ ಇಲ್ಲವಾಗುತ್ತಿದೆಂದು ' ವೀರಶೈವ ಧರ್ಮಶಿರೋಮಣಿ'ಯ ೧೪೨ನೆಯ ಪುಟದಲ್ಲಿಯೂ 'ದ್ವಿಜಾನಾಂ ವೈದಿಕಂ ಪ್ರೋಕ್ತಮನ್ಯೇಷಾಂ ತಾಂತ್ರಿಕಂಸ್ಮೃತಂ' (ಕಾ ಆ. ಪಟಲ ೨ ಶ್ಲೋ ೩೫) ಎಂಬೀ ಕಾರಣಾಗಮಾದ್ಯನಂತ ಪ್ರಮಾಣಗಳಿಂದಲೂ ' ಅತ್ಯಾಶ್ರಮಿ ' ಗಳೆಂದರೆ– ಮೀರಿದ ಆಶ್ರಮಿಗಳೆಂದೂ, 'ಅತಿವರ್ಣಾಶ್ರಮಿ'ಗಳೆಂದರೆ-– ಮೀರಿದ ವರ್ಣಾಶ್ರಮಿಗಳೆಂದೂ ಅರ್ಥಯಿಸಲು ಸಿದ್ಧವಾಗುವುದರಿಂದ ಮೇಲೆ ಹೇಳಿದಂತೆ ಸಿದ್ಧ-ಸಾಧಕೋಭಯ ದಶೆಯಲ್ಲಿಯೂ ಅವರು 'ಜಾತ್ಯತೀತ'ರೆಂಬುದು ನಿರ್ವಿವಾದವಾಗಿದೆ

ಮತ್ತು ವೀರಶೈವರು ಅತ್ಯಾಶ್ರಮಿಗಳು ಅಥವಾ ಅತಿವರ್ಣಾಶ್ರಮಿಗಳು ಎಂಬ ಬಗೆಗೆ ಇದೇ ಗ್ರಂಥದ ೫೦ನೆಯ ಪುಟದಿಂದ ೫೨ರ ವರೆಗ ಶಿವಶಾಸ್ತ್ರಮುಖೇನ ಸಿದ್ಧಾಂತವು ನಿರ್ದೇಶಗೊಳಿಸಲಾಗಿವೆ

ಇಂತು 'ಜಾತ್ಯತೀತ' ವರ್ತನೆಗೆ ಇಂಬುಗೊಟ್ಟಿದ್ದರೂ ಸಾಧಕ ದಶೆಯಲ್ಲಿ ಮಾತ್ರ ವರ್ಣತ್ರಯಗಳು 'ವೈದಿಕ'ರಿಗೆ ತೋರುತ್ತಿವೆ ಆದರೂ 'ಸಿದ್ಧ' ದಶಾಪರಪರ್ಯಾಯವಾದ ವಿಶೇಷ ದಶೆಯಲ್ಲಿ "ವಿಶೇಷಂ ನತತ್ರಜಾತಿಭೇದೋಸ್ತಿ ಸರ್ವೇ ರುದ್ರಸ್ವರೂಪಿಣಃ" ಎಂಬಂತೆ ಜಾತಿ-ಭೇದವಿಲ್ಲವೆಂಬುದು ಸ್ಪಷ್ಟವೇ ಇದೆ ಪರಂತು "ಯತ್ರ'ಸ್ಯಾದ್'ಭಾತಿ ಸಾಮಾನ್ಯಂ ತತ್ರ ಜಾತ್ಯಾದಿ ಕಲ್ಪನಾ* ಎಂಬೀ ಸೂಕ್ಷ್ಮಾಗಮ ಪ್ರಮಾಣದಂತೆ ಸಾಮಾನ್ಯದ ಶಾಪರಪರ್ಯಾಯವಾದ ಸಾಧಕ ದಶಯಲ್ಲಿ ಮಾತ್ರ ಜಾತಿವರ್ಣಾಶ್ರಮಾದಿ ಕಲ್ಪನೆಯುಂಟೆಂದು ತಿಳಿಯುತ್ತಿದೆ ಆದುದರಿಂದ ಅಂತಪ್ಪಜಾತಿಯ ಎಳ್ಳವರಿಗೆ 'ವೈದಿಕ'ರೆಂದೂ 'ಶ್ರೌತ'ರೆಂದೂ ಆಗಮಿಕವಾದ ಪಾರಿಭಾಷಿಕ ಇದೆ ಆದರೂ ಶ್ರೌತವಿಚಾರವು ಸಾಂಸ್ಕೃತಿಕ ಮೂಲವೆಂದು ಇದೇ ಪುಸ್ತಕದ ೨೧ ರಿಂದ ೩೩ನೆಯ ಪುಟಗಳ ವರಗ ಸ್ಫುಟವಾಗಿ ತೋರಿಸಲ್ಪಟ್ಟಿದೆ

ಆದರೆ ೧೨ನೆಯ ಶತಮಾನದಿಂದೀಚೆಗೆ ಕಸಬಿಗೊಂದು ಜಾತಿಯಂತೆ ನೂರಾರು ಜಾತಿಗಳು ಏರ್ಪಟ್ಟುದು ವೀರಶೈವ ಸಿದ್ಧಾಂತದ ಘೋರ ಅಸಭಿಜ್ಞತೆಯೇ ಸರಿ! ಆದಕಾರಣ ಎಲ್ಲ ಕಸಬಿನ ಮೇಲೆ ಹೊರಹೊರಟ ಮತ್ತು ಅಶಾಸ್ತ್ರೀಯವಾದ ಇಂತಹ ಜಾತಿಗಳು ಸ್ವಸ್ವಸಂಸ್ಕೃತಿಯ ಮೇರೆಗ ಬೇಗನೆ ವಿಲೀನವಾಗುವುದು ಅತ್ಯಗತ್ಯವೆಂದು, ಸಮಾಜ ಬಾಂಧವರಿಗೆ ಮೊದಲನೆಯದಾಗಿ ಸೂಚಿಸಲಾಗಿದೆ

ಇನ್ನು ವೀರಶೈವದಲ್ಲಿ ದೀಕ್ಷಿತರಾದ ಸ್ತ್ರೀ ಶೂದ್ರಾದಿಗಳು ಶಿವತ್ವನೆ-ಯ್ದುವರೆಂದು, ಶಿವಸಿದ್ಧಾಂತವಿರುವದರಿಂದ, ವೀರಶೈವದಲ್ಲಿ ಶೂದ್ರತೆಗೆ ಇಂಬಿಲ್ಲವೆಂದು ಇದೇ ಗ್ರಂಥದ ೫೩ ನೆಯ ಪುಟದಿಂದ ೫೮ ರ ವರೆಗೆ ತೋರಿಸಲ್ಪಟ್ಟಿದೆ ●

ಅದುಕಾರಣ ಸಾಧಕ ದಶೆಯಲ್ಲಿಯೂ ಕೂಡ ಶೂದ್ರತೆಗೆ ಇಂಬಿಲ್ಲ-ದಾದ ಇಂತಹ ವೀರಶೈವರನ್ನು 'ಹಿಂದೂಲಾ'ದಲ್ಲಿ ಶೂದ್ರಪಂಕ್ತಿಗೆ ಎಳೆ-ದಿರುವುದು ಅದೇನು ಕಾರಣ? ಎಂಬುದನ್ನು ಸಕಲ ಸಮಾಜ ಬಂಧುಗಳು ಇದು ವರೆಗೂ ಯೋಚಿಸದಿರುವುದು, ಶೋಚನೀಯವಾದುದೆಂದು, ಎರಡನೆಯದಾಗಿ ಸೂಚಿಸುವ ಮಾತಾಗಿದೆ

ಎಷ್ಟೋ ಜನರಿಗೆ ಪಕ್ಷಾಂಧತೆಯ ಮೂಲಕ ವೀರಶೈವದ ಸಂಪೂರ್ಣ ಮಾಹಿತಿ ಇಲ್ಲದುದರಿಂದ ಈ ಗ್ರಂಥವನ್ನು ಓದುವಾಗ ಭಿನ್ನಾಭಿಪ್ರಾಯ-ವಾಗಿ ತೋರಬಹುದು ಅಂತಹ ಅವರಿಗೆ ಮುಖ್ಯವಾಗಿ ತಿಳಿಸುವದೇ-ನ್ನಂದರೆ-- ಇದರಲ್ಲಿ ಸ್ವಕಪೋಲಕಲ್ಪಿತವಾಗಿ ಆವುದನ್ನೂ ಬರೆದುದಿಲ್ಲ, ಆದರೆ ಅಪಾರವಾದ ವೀರಶೈವ ಸಾಹಿತ್ಯಸಾಗರದಿಂದಲೇ ನಾರತರವಾಗಿ ಸಂಗ್ರಹಿಸಲ್ಪಟ್ಟ ಪ್ರಮಾಣಗಳನ್ನು ಅವರು ಸಾವಧಾನವಾಗಿ ಅರ್ಥಯಿಸ ಬೇಕಂದು, ನನ್ನ ನಮ್ರ ಸೂಚನೆ ಇದೆ

ನಾನು ಹೇಳಿದುದೇ ಸಿದ್ಧಾಂತವೆಂದು ಅಹಂಕರಿಸುವುದಿಲ್ಲ ಸತ್ಯಾ ಸತ್ಯವೆಂಬುದನ್ನು ಮಹಾನುಭಾವಿಗಳಾದ ವಿಮರ್ಶಕರೇ ನಿರ್ಣಯಿಸಲಿ, ಎಂದು- ಇದನ್ನು ನಾನು ಅವರ ಪಾಲಿಗೇ ಮೀಸಲಾಗಿರಿಸಿದ್ದೇನೆ ನನಗೆ ಹೊಳೆದ ವಿಷಯವನ್ನು ಮಾತ್ರ ಮಹಾ ಜನಗಳ ದೃಷ್ಟಿಗೆ ಹಾಕುವುದೇ ನನ್ನ ಕರ್ತವ್ಯವೆಂದಿಷ್ಟೇ ಭಾವಿಸಿರುವೆನಲ್ಲದೆ, ಮತ್ತಾವುದನ್ನೂ ಅಲ್ಲ ಆದ ಕಾರಣ ವೀರಗೋತ್ರಜಾತನಾದರೂ ಭಾಕ್ತಕವಾದ ಹೆಮ್ಮೆಯಿಂದ ಬಸವ ಗೋತ್ರನೂ ಅಹುದೆಂದು ಹೇಳುವೀ ನನಗೆ— ಸತ್ಯಾನ್ವೇಷಣವೇ ಮುಖ್ಯ ವಾದ ನನ್ನ ಗುರಿಯೆಂಬುದನ್ನು, ಅವರಿಗೆ ಬೇರೆ ಬಿಚ್ಚಿಹೇಳಬೇಕಾಗಿಲ್ಲ

ಭಾರತವು 'ಜಾತ್ಯತೀತ' ತತ್ವದ ಆಧಾರದ ಮೇಲೆ ಸ್ವಾತಂತ್ರ್ಯ-ವನ್ನು ಸಂಪಾದಿಸಿದಂದಿನಿಂದ, ಎಲ್ಲ ಭಾರತೀಯರ ಒಲವು ಆದರ ಮೇಲೆ ಬದ್ಧಿರಲು ಸಾಕು ಆದರೆ ಇಂದಿನ 'ಜಾತ್ಯತೀತ' ತತ್ವವೇನೆಂಬುದು ಜಾಣರೆನಿಸಿಕೊಳ್ಳುವ ಎಷ್ಟೋ ಜನಕ್ಕೆ ಅರ್ಥವಾಗುವುದು, ಕಠಿಣವಾಗಿದೆ ಅದರಿಂದ ನಿಜಸಂಸ್ಕೃತಿಗೆ ಮೂಲಾಧಾರವೂ, ಸನಾತನವೂ ಆದ ಧರ್ಮದ

ಜಿಜ್ಞಾಸೆಯಲ್ಲಿ, ಅವರಿಗೆ ನಿಜವಾಗಿ ತೊಂದರೆಯಾಗಬಹುದಾಗಿದೆ ಇದ-ರಿಂದಾಗಿ ಘೋರ ಅನಭಿಜ್ಞತ್ವವೂ, ದುರಾಗ್ರಹವೂ ಅಂಟಿಕೊಂಡು ಅವರು ತೊಳಲಿ ಬಳಲಿ, ನಿಜಧರ್ಮದ ಉಚ್ಛೇದಕ್ಕಾಗಿ ಉಜ್ಜುಗಿಸಬಹುದಾಗಿ ಭಾವನೆ ಬರುತ್ತಿದೆ ಆದರೆ ಸತ್ಯವಾದ ಧರ್ಮ ಮತ್ತು ಅಂತಹ ಸಾಹಿತ್ಯ ಸಂಸ್ಕೃತಿಗಳೆಂದೂ,! ಯಾರಿಂದಲೂ ಅಳಿಯಲಾರವೆಂಬುದನ್ನು ಅವರು ತಿಳಿಯಲಿಕ್ಕೆ ಸಾಕು ,ಆದುದರಿಂದ ಈಗಿನ 'ಜಾತ್ಯತೀತ' ರಾಷ್ಟ್ರಕಲ್ಪನೆ ಹೇಗೆ? ಎಂಬುದಕ್ಕೆ ಅವರು ಮೊದಲು ಗಮನಕೊಡುವುದು ಬಹಳ ಲೇಸು ಅದರಿಂದ ಅವರ ವಿಚಾರವಿನಿಮಯವಾಗಬಹುದಾಗಿದೆ ಇಂದಿನ ಜಾತ್ಯತೀತ, ರಾಷ್ಟ್ರಕಲ್ಪನೆಯ ಬಗೆಗೆ ಅವರೇ ಕೆಳಗೆ ಬರೆದುದನ್ನು ಓದಿ ಕೊಳ್ಳಬೇಕು

ಅದೇನಂದರೆ— ಮಾನ್ಯರಾದ ಡಾ|| **ಎಸ್ ಸಿ. ನಂದೀಮಠ** ಎಂ ಏ , ಪಿಚ್ ಡಿ ಅವರು ತಮ್ಮ ೩೫ನೆಯ 'ಕನ್ನಡ ಸಾಹಿತ್ಯ ಸಮ್ಮೇಳನ'ದ ಅಧ್ಯಕ್ಷ ಭಾಷಣದ ೫ನೆಯ ಪುಟದಲ್ಲಿ—

" ಇಂದಿನ ಜಾತ್ಯತೀತ ರಾಷ್ಟ್ರದಕಲ್ಪನೆಯೆಂದರೆ ಅಂದಿನ ಧಾರ್ಮಿಕ ಆಚಾರ ವಿಚಾರ ಸ್ವಾತಂತ್ರ್ಯ ಜಾತ್ಯತೀತ ರಾಷ್ಟ್ರವೆಂದರೆ— ಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಿದ ರಾಷ್ಟ್ರವಲ್ಲ ನಮ್ಮ ಘಟನೆಯೊಳಗಿನ ಮೂಲ ಭೂತ ಹಕ್ಕುಗಳಲ್ಲಿ ಧಾರ್ಮಿಕ ಸ್ವಾತಂತ್ರ್ಯವೂ ಒಂದಾಗಿದೆ ಆದುದರಿಂದ ಸರಕಾರದ ಉದ್ದೇಶವು ವ್ಯಕ್ತಿಗಳ ಧರ್ಮದಲ್ಲಿ ಕೈಹಾಕುವುದಾಗಿಲ್ಲ ಆದರೆ ಆ ಧರ್ಮವು ಆಡಳಿತೆ, ಶಿಕ್ಷಣ, ರಾಜ್ಯಕಾರಣ, ಸಾಮಾಜಿಕ ಜೀವನಗಳಲ್ಲಿ ಬರಕೂಡದು ಭಾರತೀಯರೆಲ್ಲ ಒಂದೇ ಎಂಬಭಾವನೆಗೆ ಈ ಧಾರ್ಮಿಕ ಕಲ್ಪನೆ ಅಡ್ಡಿಯನ್ನೊಡ್ಡಕೂಡದು" ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ

ಇನ್ನು ಈ ಗ್ರಂಥದಲ್ಲಿ 'ವೈದಿಕ'ರೆಂದು ಹೇಳವಾಗ ಜಾತೀಯತೆಯು ತೋರುವುದರಿಂದ "ಇದು ಯುಕ್ತವಾಗಲಾರದೆಂದು ವಿಧವಿಧವಾಗಿ ಆಕ್ಷೇಪಿಸುವುದು ಸಲ್ಲದು ಅದೇನು ಕಾರಣವೆಂದರೆ— ಅವರೇವಿಚಾರಕ್ಕೆ ಕೂಪ ಮಂಡೂಕತನವನ್ನು ಬಿಟ್ಟು, ರಾಜ್ಯರಂಗದಲ್ಲಿನಿಂತು, ವಿಶಾಲವಾಗಿ ವಿಚಾ

ರಿಸಿದರೆ, ವೀರಶೈವರ ಜಾತೀಯತೆಯು ಎಂತಹದು? ಎಂಬುದು ಸಿರ್ಣ ಯಕ್ಕೆ ಬರುತ್ತಿದೆ. ಇದರಿಂದ ಇಂತಹ ಆಕ್ಷೇಪಗಳೇ ಉದಯಿಸಲಾರವು

ಹೇಗೆಂದರೆ— 'ಜಾತಿ'ಯು ನೈಸರ್ಗಿಕವೋ ? ಸಾಂಸ್ಕೃತಿಕವೋ ? ಎಂದು ಕೇಳುವಾಗ- ನೈಸರ್ಗಿಕವೆಂದರೆ- ಈ ಕಣ್ಣಿಗೆ ತೋರುವ ಸೃಷ್ಟಿ ಯಲ್ಲಿ ಸರ್ವಸಾಮಾನ್ಯವಾಗಿ ಪ್ರಾಣಿ-ಪಕ್ಷಿ ಮುಂತಾದ ಎಲ್ಲ ಜೀವಿಗಳಲ್ಲಿ ಉದಾಹರಣಾರ್ಥವಾಗಿ- ಕಾಗೆಯು ಕೋಳಿಯಲ್ಲ ಕೋಳಿಯು ಕಾಗೆ ಯಲ್ಲ ಕಾಗೆಯು ಎಂದಾದರೂ ಕಾಗೆಯೇ ಕೋಳಿಯು ಎಂದಾದರೂ ಕೋಳಿಯೇ ಆದಕಾರಣ ಕಾಗೆಯದೊಂದು 'ಜಾತಿ' ಕೋಳಿಯದೊಂದು 'ಜಾತಿ' ಎಂಬುದು ನೈಸರ್ಗಿಕವು ಮತ್ತು ಅಂಗಾವಯವಾದಿ ಶರೀರ ರಚನೆ ಯಲ್ಲಿಯೂ ಭಿನ್ನತೆಯುಂಟು ಹಾಗೆಯೇ ಮಾನವರಲ್ಲಿ ಅದರಲ್ಲಿಯೂ 'ಭಾರತೀಯ'ರಲ್ಲಿ 'ಬೌದ್ಧ' 'ಜೈನ' 'ಇಸ್ಲಾಮ' ಮೊದಲಾದ ಧರ್ಮಿಗಳಲ್ಲಿ ನೈಸರ್ಗಿಕವಾದ ಅಂಗಾವಯವಾದಿ ಶರೀರ ರಚನೆಯಲ್ಲಿ ಭಿನ್ನತೆಯೊಡೆದು ಕಾಣದುದರಿಂದ, ಹಾಗೆಯೇ ವೀರಶೈವರಿಗೆ ಸಾಮಾನ್ಯವಾಗಿ ಆವಜಾತಿ-ಯನ್ನು ಹೇಳಬೇಕು ? ಮನುಷ್ಯಜಾತಿಯನ್ನು ? ಅಲ್ಲವೇ !!

ಆದುಕಾರಣ ಶ್ರೀ ರೇಣುಕರು— ವೀರಶೈವ ( ತಾಂತ್ರಿಕ ) ರಿರಲಿ, ವೀರಮಾಹೇಶ್ವರ (ವೈದಿಕ)ರಿರಲಿ ಅವರು ಮನುಷ್ಯರೇ ಎಂಬ ಭಾವ ವನ್ನು ಶಿವಾಶ್ರಿತೇಷು 'ನರಾಃ' ( ಸಿ ಶಿ ವ ೫ ಶ್ಲೋ ೨೦–೨೧ ) ಎಂಬ ಪದದಿಂದ ಸೂಚಿಸಿರುವರು

ಇನ್ನು ಮನುಷ್ಯ 'ಜಾತಿ'ಯ ವೀರಶೈವ ಸಾಧಕರಲ್ಲಿ 'ವೈದಿಕ'ರಿಗೆ ತೋರುವ ಜಾತಿವಾದವಾದರೋ–'ಆತ್ಯಾಶ್ರಮಾ'ಚಾರ ಮೂಲಕವಾಗಿವೆ ಪಿಂಡದಿಂದ ವರ್ಣಗಳ ಅನುವರ್ತನೆಯು 'ಜಾತಿ'ಯೆಂಬುದಿದ್ದರೂ ಇಂತಹ ಅನುವರ್ತನ ತದತಿ ಕ್ರಮಣಕವಾದುದೇ 'ಅತ್ಯಾಶ್ರಮ' ಲಕ್ಷಣವೆಂಬುದು ಪ್ರಸಿದ್ಧವಾಗಿದೆ

ಆದುಕಾರಣ ಸುಪ್ರಭೇದಾಗಮ ಪ್ರಮಾಣದಲ್ಲಿ— 'ವರ್ಣಾಶ್ರಮ ಪರಿಕ್ರಮಾನ್' ಅಪ್ರಾಕೃತ ಸದಾಚಾರಾನ್ ಎಂಬುದಾಗಿ ವರ್ಣಾಶ್ರಮ ಪರಿಕ್ರಮಗಳು ಅಪ್ರಾಕೃತ ಸದಾಚಾರಗಳೆಂದೇ ತಿಳಿದು ಬರುತ್ತಿದೆ ಕ್ರಿಯಾ

ಸಾರದ ೨೬ನೆಯ ಉಪದೇಶದಲ್ಲಿ— 'ವೈದಿಕಾಚಾರ ಸನ್ಯಶಾಃ ಚರ್ಯಾ ಪಾದೇಶಿವಾಚಾರಾಃ' (ಕ್ರಿ ಸಾ ಉ ೨೬ ಶ್ಲೋ ೭) 'ಒಂದೆಡೆಯಲ್ಲಿ ಪ್ರಾಕೃತ ವೈದಿಕರಲ್ಲಿ ತೋರುವ ಆಚಾರ ಸಮಾನವಾದ ಶಿವಾಚಾರಗಳು ಚರ್ಯಾ ಪಾದದಲ್ಲಿ' ಎಂಬುದಾಗಿ ಆಚಾರಗಳೇ ಉಕ್ತವಾಗಿವೆ ಇದುಕಾರಣ ಎಲ್ಲ ವರ್ಣಾಶ್ರಮಬೋಧಕ ಪ್ರಮಾಣಗಳಲ್ಲಿ—

'ವರ್ಣಾಶ್ರಮೀಯ ಧರ್ಮಾಷ್ಟ' 'ವರ್ಣಾಶ್ರಮೋಚಿತ ಧರ್ಮ' 'ವರ್ಣಾಶ್ರಮಕ್ರಿಯಾ' 'ವರ್ಣಾಶ್ರಮಸದಾಚಾರಾಃ' ಎಂಬಿವೇ ಮೊದಲಾದ ಉದಾಹರಣಗಳನ್ನು ಕಾಣಬಹುದಾಗಿದೆ

ಆದುದರಿಂದ ವೀರಶೈವರಲ್ಲಿ— 'ವೈದಿಕ' ಅಥವಾ 'ಶ್ರೌತ'ರಲ್ಲಿ— ವರ್ಣ–ಆಶ್ರಮ– ಜಾತಿ ಗೋತ್ರಾದಿಗಳಿಂದ ಕಂಡುಬರುವುದೇನಂದರೆ-- ಐತಿಹಾಸಿಕವಾದ ಪರಂಪರಾಗತ ಆಚಾರ ಬೋಧಕ ಸಂಸ್ಕೃತಿಯಲ್ಲದೆ ಮತ್ತೇನು ? ಆದುದರಿಂದ ವೀರಶೈವರ ಜಾತೀಯತೆಯು ಎಂತಹದು ? ಎಂಬುದು ನಿರ್ಣಯಕ್ಕೆ ಬಂದಿರಬೇಕಲ್ಲವೇ ? ಇದಕಾಗಿಯೇ ಶ್ರೌತ ವಿಚಾರವು ಸಾಂಸ್ಕೃತಿಕ ಮೂಲವೆಂದು ಮೇಲೆಯೇ ತೋರಿಸಿದುದಾಗಿದೆ

ವಸ್ತುತಃ ವೈದಿಕ ತಾಂತ್ರಿಕತೆಯನ್ನು ನಿರೂಪಿಸುವ ವೈದಿಕ–ತಾಂತ್ರಿಕ— ವೀರ ಶೈವಾಗಮಗಳು, ಸಾಮಾನ್ಯವಾಗಿ ಸಾಧಕದಶೆಯನ್ನೇ ಸಾರುತ್ತಿವೆ ಇವು ವಿಶೇಷವಾಗಿ ಸಿದ್ಧದಶೆಯನ್ನು ನಿರೂಪಿಸುವಾಗ "ವೀರಶೈವಾಗಮಾನಾಂತು ವಿಶೇಷಣ್ಯೈಕ ರೂಪತಾ" ಎಂಬೀ ಮತ ಭಾಷ್ಯಕಾರಿಕೆಯ ಉಪೋದ್ಘಾತ ವಚನದಂತ ತಾಂತ್ರಿಕ ವೈದಿಕ– ಜೀವನ್ಮುಕ್ತ– ಶಿವಾರೂಢ – ಕೃತಕೃತ್ಯ ಪರಿಪೂರ್ಣ ಶಿವಜ್ಞಾನಿ ಶಿವರೂಪಿ ಮೊದಲಾದ ಪರ್ಯಾಯದಿಂದ ಏಕರೂಪತೆಯೇ ತೋರುತ್ತಿದೆ ಇಂತಹ ಇವನಿಗೆ ಪ್ರಾರಬ್ಧವಾಸನೆಯೂ ಕೂಡ ನಾಶವಾಗಿ ಇವನು ಅಖಂಡ ವಿಜ್ಞಾನಿಯಾದ 'ವೀರಶೈವ' ಪದವಾಚ್ಯನು ಆಗುವನು ಈ ಬಗೆಗೆ— "ದ್ವೈವಿಧ್ಯಂ ವ್ಯವಹಾರಸ್ಯ ಯದಾನಾಶಃ ಸವಾಸನಂ|| ಯದ್ವೈವಾಖಂಡ

ವಿಜ್ಞಾನಂ ವೀರಶೈವಸ್ತದಾಭವೇತ್' ಎಂಬೀ ಪಾರಮೇಶ್ವರತಂತ್ರವಚನ ವಿಲ್ಲಿ ಪ್ರಮಾಣವಾಗಿದ

ಒಟ್ಟಾರೆ ಹೇಳಬೇಕೆಂದರೆ— ಸನಾತನವೂ, ಶುದ್ಧವೂ, ಸತ್ಯವೂ ಆದ ಧರ್ಮದ ಪರಿಶುದ್ಧ ಸಾಹಿತ್ಯವೇ ಸತ್ಯಸಂಸ್ಕೃತಿಗೆ ಮೂಲ ಕಾರಣವು

ಇಂತು ವೀರಶೈವ ಸಾಹಿತ್ಯಸಾಗರದಿಂದ ಕೆಲವೊಂದು ಮೌಕ್ತಿಕ-ಮಣಿಗಳನ್ನು ಶ್ರಮವಹಿಸಿ ನಾನು ಸಂಗ್ರಹಿಸಿರುವುದೇನೋ ನಿಜ! ಆದರೆ ಪೂಜ್ಯರ ಮತ್ತು ಮಾನ್ಯ ಪಂಡಿತರ ಕಂಠಗತವಾಗಿ, ಅವರಿಗೆ ಇದು 'ಮೌಕ್ತಿಕ ಮಣಿಹಾರ'ವಾಗಿ ಸ್ವೀಕೃತವಾದರೆ— ನನ್ನೀ ಕಿಂಚಿತ್ಪ್ರಯತ್ನವು ಸಾರ್ಥಕ್ಯವೆಂದು ಭಾವಿಸಲಾಗುತ್ತಿದೆ

ಇದೇ ಉದ್ದೇಶದಿಂದಲೇ ಅನೇಕ ಪೂಜ್ಯಪಾದರೂ ಪಂಡಿತಪ್ರಕಾಂಡರೂ ಇದರ ಬಗೆಗೆ ದಯವಿಟ್ಟು ತಮ್ಮ ಸದಭಿಪ್ರಾಯಗಳನ್ನು ನನಗೆ ಕಳಿಸಿದುದಕ್ಕಾಗಿ, ಅವುಗಳನ್ನು ಶಿರಸಾಮಾನ್ಯಮಾಡಿ ಸ್ವಾಗತಿಸಿದ್ದೇನೆ ಮತ್ತು ಅವರು ತಮ್ಮ ಅಮೌಲ್ಯ ಸಮಯವನ್ನು ಲೆಕ್ಕಿಸದೆ, ನಮ್ಮ 'ಸ್ವಾತಂತ್ರ್ಯದ ಅನಾದಿತ್ವ'ಕ್ಕೆ ಪ್ರೋತ್ಸಾಹಿಸಿದುದಕ್ಕಾಗಿ ಆ ಮಹಾಶಯರ ಮಹೋಪಕಾರವನ್ನು ಹೃತ್ಪೂರ್ವಕ ಸ್ಮರಿಸಲಾಗಿದ. ಅಲ್ಲದೆ ಅವರ ಅಪ್ಪಣೆಗಳನ್ನು 'ಪರಿಶಿಷ್ಟ'ದಲ್ಲಿ ಕೊಡಲಾಗಿದ

ನಾನು ಈ ಗ್ರಂಥದ ಬಗೆಗೆ– ಬಾಗಲಕೋಟೆಯ ಶ್ರೀ ಬಸವೇಶ್ವರ ಕಾಲೇಜದ ಪ್ರಿನ್ಸಿಪಾಲರೂ, ಪರಮದಯಾಳುಗಳೂ, ತತ್ವವೇತ್ತರೂ ಆದ ಮಾನ್ಯ **" ಡಾ|| ಎಸ್. ಸಿ ನಂದೀಮಠ"**ರಿಗೆ ಬಿನ್ನಯಿಸಿಕೊಂಡುದಕ್ಕೆ ಅವರು ದಯವಿಟ್ಟು ತಮ್ಮ ಮಹತ್ವದ ಸಮಯಕ್ಕೆಡೆಗೊಡದೆ ಮುದದಿಂದ ಮುದ್ದಾದ 'ಮುನ್ನುಡಿ'ಯನ್ನು ದಯಪಾಲಿಸಿದುದಕ್ಕಾಗಿ– ಅವರಿಗೆ ಚಿರಂತನ ಋಣಿಯಾಗಿರುವೆನು

ಮತ್ತು ಇದೇ ಬಗೆಯಾಗಿ ಶ್ರೀಶೈಲ ಜಗದ್ಗುರುಗಳಿಗೆ ಅರಿಕೆಮಾಡಿಕೊಂಡುದಕ್ಕೆ ಅವರು ತಮ್ಮ ಪಟ್ಟಾಧಿಕಾರದ ೧೨ನೆಯ ವರ್ಷದ ವರ್ಧಂತ್ಯುತ್ಸವದಲ್ಲಿ ನನಗೆ— 'ವೀರಶೈವತತ್ವವಿಶಾರದ' ಎಂದು ಬಿರುದನ್ನು

ಡಯ ಪಾಲಿಸಿ, ನಮ್ಮ ಗ್ರಂಥಕ್ಕೆ ಪ್ರೋತ್ಸಾಹಪರವಾದ 'ಪ್ರಸ್ತಾವನಿ-ರೂಪಣೆ'ಯನ್ನು ಸಹ ಆಶೀರ್ವದಿಸಿರುವರು

ಮತ್ತು 'ಚಿತ್ತರಗಿ' ಶಿವಾನುಭವ ಚರವರ್ಯ ಶ್ರೀ ಪ್ರ ಸ್ವ ಮಹಾಂತ ಸ್ವಾಮಿಗಳು ಇಲಕಲ್ಲ ಇವರ ಸನ್ನಿಧಿಗೆ ಅರಿಕೆ ಮಾಡಿಕೊಂಡುದಕ್ಕಾಗಿ ಸನ್ನಿಧಿಯವರು ಬಹುಶ್ರಮವಹಿಸಿ ಪ್ರಚುರವೂ, ಪ್ರಶಸ್ತವೂ, ಆದ 'ಪ್ರಸ್ತಾವನಿರೂಪಣೆ'ಯನ್ನು ಆಶೀರ್ವದಿಸಿರುವರು

ನಮ್ಮ 'ಸ್ವಾತಂತ್ರ್ಯದ ಅನಾದಿತ್ವ'ಕ್ಕೆ ಈ ಬಗೆಯಾಗಿ ಪ್ರೋತ್ಸಾಹಿಸಿ ಶುಭಾಶೀರ್ವಚನವಿತ್ತುದಕ್ಕಾಗಿ ನಾನು, ಮೇಲ್ಕಂಡ ಶ್ರೀ ಜಗದ್ಗುರು-ಗಳಿಗೂ, ಶ್ರೀ ನಿರಾಭಾರಿ ಗುರುವರ್ಯರಿಗೂ ಅತ್ಯಂತ ಉಪಕೃತನಾಗಿ-ರುವೆನಲ್ಲದೆ, ತಾವು ತಮ್ಮ ಕರ್ತವ್ಯದಕ್ಷರಾಗಿ ಪ್ರಗತಿಶೀಲರಾದ ಇಂತಹ ಹರಗುರುಚರ ಮೂರ್ತಿಗಳ ಅಗತ್ಯವು ಸದ್ಯಃ ಸಮಾಜಕ್ಕೆ ಬಹಳೇ ಬೇಕಾಗಿದೆಯೆಂದೂ, ಇತರ ಗುರುಚರವರರು ಬೇಗನೇ ಇದನ್ನು ಅನುಕರಿಸಲೆಂದೂ ಹೇಳದಿರಲಾರೆನು.

ಇನ್ನು ಈ ಗ್ರಂಥಕ್ಕೆ ವಿಮರ್ಶಾತ್ಮಕವಾಗಿ ವೇ|| ಪಂ ಉಮಾಪತಿ ಶಾಸ್ತ್ರಿಗಳು ಬಿ ಎ , ಸಂಪಾದಕರು 'ಸುಕುಮಾರ ಮಾಸಪತ್ರಿಕೆ' ಶಿವಯೋಗ ಮಂದಿರ ಇವರು ಮಹದರ್ಥಸೂಚಕವೂ, ಉಜ್ವಲವೂ ಸಂಕ್ಷಿಪ್ತವೂ ಆದ " ಸಂದೇಶ"ವಿತ್ತುದಕ್ಕಾಗಿ, ಅವನ್ನು ಈ ಗ್ರಂಥದ ಅಗ್ರಸ್ಥಾನದಲ್ಲಿ, ಶೇಖರಿಸಲಾಗಿದ ಅಲ್ಲದೆ ಅವರಿಗೆ ಕೃತಜ್ಞತೆಯನ್ನು ಅರ್ಪಿಸಲಾಗಿದೆ ಮತ್ತು ಆಸ್ಥಾನ ವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಬೆಂಗಳೂರ ಬಿ ಶಿವಮೂರ್ತಿ ಶಾಸ್ತ್ರಿಗಳೇ ಮೊದಲಾದ ಮಹಾಪಂಡಿತರ ಅಭಿಪ್ರಾಯಗಳು ಬಹಳೇ ಬರುವವಿದ್ದು ಅವೆಲ್ಲವುಗಳನ್ನು ಹಿಂದಿನಿಂದ ಪ್ರಕಟಿಸಲಾಗುತ್ತಿದೆ

ಈ ಗ್ರಂಥದ ಅಚ್ಚಿಗಾಗಿ ವೆಚ್ಚವನ್ನು ದಾನರೂಪೇಣ ಯೋಗ್ಯತಾನುಸಾರ ವಿತ್ತವರ "ಸಹಾಯಕಪತ್ರ"ವನ್ನು ಕೊನೆಯಲ್ಲಿ ಕೊಟ್ಟಿರುವುದಲ್ಲದೆ, ಇಂತಹ ಉದಾರಿಗಳನ್ನು ಸರ್ವದಾ ಸ್ಮರಿಸುವುದು ಸ್ವಕರ್ತವ್ಯವಾಗಿದೆ

ಜೀವಭಾವದ ಮೂಲಕ ತಪ್ಪುಗಳು ಮತ್ತು ಅಶುದ್ಧಿಗಳುಂಟೆಂದು ಒಪ್ಪಲೇ ಬೇಕಾದ ವಿಷಯ ಸದಯಹೃದಯರು ತಿಳಸಿದರೆ ಸೂಕ್ತಕಂಡಲ್ಲಿ ಅನೆಯಾವೃತ್ತಿಯಲ್ಲಿ ನರಿಪಡಿಸಲಾಗುವುದು ಹಾಗು ಬಹುತರ ಅರ್ಥಕ್ಕೆ ತೊಂದರೆ ಬಾರದಂತೆ ಶುದ್ಧಿಪತ್ರಿಕೆಯೂ ಕೊಡಲಾಗಿದೆ ಓದುಗರು ಸರಿ-ಪಡಿಸಿಕೊಳ್ಳುವರೆಂದು ವಿನಂತಿಸುತ್ತೇನೆ

ಸಕಾಲಕ್ಕೆ ಸರಿಯಾಗಿ ಮುದ್ರಿಸಿಕೊಟ್ಟ "ಬಸವರಾಜ ಮುದ್ರಣಾ-ಲಯ'ದ ಮಾಲಕರಾದ ಜಿ ಎಚ್ ಚನ್ನಪ್ಪನವರು ಬುಕ್ಕ-ಸೆಲ್ಲರ ಬಾಗಲ ಕೋಟ ಇವರಿಗೆ ಅನೇಕ ಧನ್ಯವಾದಗಳಿವೆ ಮತ್ತು ಇದರ ಪ್ರಕಾಶಕರಾದ ಮ ರಾ ಗುರುಪಾದಪ್ಪ ಶಂಕರಪ್ಪ ಇಲಾಳಶಟ್ಟರ ದಲಾಲಿ ಅಂಗಡಿ, ಬಾಗಲಕೋಟ ಇವರು ಎಲ್ಲ ರೀತಿಯಿಂದ ಸಹಾಯವಿತ್ತುದಕ್ಕಾಗಿ ಅವರಿಗೆ ಮನಃಪೂರ್ವಕವಾಗಿ ಅಭಿನಂದನೆಯನ್ನು ಸಮರ್ಪಿಸಲಾಗಿದೆ

ವೀರಶೈವವು 'ಸಮನ್ವಯಯೋಗ'ವೆಂದು ಪರರಿಂದ ಬಣ್ಣಿಸಲ್ಪಡು ವಾಗ, ಸ್ವಕೀಯರು ಸ್ವಧರ್ಮದಲ್ಲಿ– ಒಂದಿಲ್ಲೊಂದಾದ ಆಂತರಿಕ ತೊಂದರೆ ಗಳನ್ನು ದೂರೀಕರಿಸಿ, ವೀರಶೈವವು ಸರ್ವಶ್ರುತಿ-ಸಮನ್ವಯವೆಂದು ತಿಳಿದು ಎಲ್ಲ ವೀರಶೈವರೂ ಸಂಘಟಿತರಾಗುವುದು, ಬಹಳೇ ಮೇಲು

ಇವೇ ದೃಷ್ಟಿಯಿಂದ ಬಹುಶ್ರಮಪಟ್ಟು ಬರೆಯಲ್ಪಟ್ಟ ಇದನ್ನು ಸರ್ವರೂ ಸಮಾಧಾನ ಚಿತ್ತದಿಂದ ಅರಿತು ಆಚರಿಸಲು, ಇಂತಹ ಸಮ ನ್ವಯ ದೃಷ್ಟಿಯಿಂದ ನಿಜವಾದ ಸಂಸ್ಕೃತಿಯ ಸತ್ಯಾಸತ್ಯತೆಯನ್ನು ಕಂಡು ಕೊಳ್ಳಲೆಂದೂ, ಸತ್ಯಸಂಸ್ಕೃತಿಯ ಆಧಾರವಾದ ಸಾಹಿತ್ಯದತ್ತ ದೃಷ್ಟಿ ಇಟ್ಟು ವಿಶೇಷವಾಗಿ ವೀರಶೈವ ಧಾರ್ಮಿಕ ಸಮನ್ವಯ ತತ್ವದ ಮೇಲೆ, ಮಹಾನು ಭಾವಿಗಳಾದ ವಿಮರ್ಶಕರು ಹೆಚ್ಚು ಹೆಚ್ಚು ಬೆಳಕನ್ನುಂಟುಮಾಡಲೆಂದೂ ಕೊನೆಯದಾಗಿ ಸೂಚಿಸುವೆನು.

ತಮ್ಮ ವಿಧೇಯ,

**ಗ್ರಂಥಕರ್ತ.**

# ಮಹಾಜನಗಳಲ್ಲಿ ನಿವೇದನೆ



" ಶ್ರೀ ಗೌರೀನಾಥ ಗ್ರಂಥಮಾಲೆ " ಯ ತೃತೀಯ ಪುಷ್ಪವಾಗಿರಿಸಿದ "ವೀರಶೈವ ಷಟ್‌ಸ್ಥಲ ಬ್ರಹ್ಮದೀಪಿಕೆ" ಯು ಅಚ್ಚಿನಲ್ಲಿದೆ ಕಾರಣ ಇದರ ಪ್ರತಿಯು ಕೈಬರಹದ ಅಥವಾ ತಾಳ ಓಲೆಯದು ಯಾರಲ್ಲಿಯಾದರೂ ಇದ್ದರೆ ದಯವಿಟ್ಟು ಕೆಳಗಿನ ವಿಳಾಸಕ್ಕೆ ಕಳಿಸಬೇಕು ಇಲ್ಲವೇ ಪತ್ರದ್ವಾರದಿಂದಾದರೂ ತಿಳಿಸಬೇಕು.

ವಿಳಾಸ - ಪಂ|| ರಾ. ಗೌರೀನಾಥಶಾಸ್ತ್ರಿ,<br>
ಕಾಟಾಪುರ ಹಿರಿಮಠ,<br>
ಮು. ಇಲಾಳ<br>
ಪೋ ಅಮೀನಗಡ, (ತಾ ಹುನಗುಂದ)

# ಪ್ರಕಾಶಕರ ಮೊದಲ್ನುಡಿ

ನಮ್ಮ ಭಾರತೀಯರಲ್ಲಿ "ವಿಶ್ವಧರ್ಮ"ವೆಂದು ವಿಖ್ಯಾತವಾದ ವೀರಶೈವದ ವೈಶಿಷ್ಟ್ಯ ದ್ಯೋತಕವಾಗಿ ತಾ॥ ೧೫—೮—೧೯೫೨ ನೆಯ ಇಂದಿನ ಸ್ವಾತಂತ್ರ್ಯ ದಿನಾಚರಣದ ಮೂಲಕ "ಸ್ವಾತಂತ್ರ್ಯದ ಅನಾದಿತ್ವ"ವು ಪ್ರಕಾಶಗೊಂಡದ್ದು ನಮ್ಮ ನಿಮ್ಮೆಲ್ಲರಿಗೂ ಬಹಳೇ ಹೆಮ್ಮೆಯ ಮತ್ತು ಸಂತೋಷದ ಸಂಗತಿಯೇ ಸರಿ

ಈ ಗ್ರಂಥವನ್ನು **ಪಂ॥ ರಾ. ಗೌರೀನಾಥ ಶಾಸ್ತ್ರಿಗಳು ಹಿರಿಮಠ ಕಾಟಾಪುರ, ಸಾ॥ ಇಲಾಳ** (ತಾ ಹುನಗುಂದ) ಇವರು ಬರೆದು ಕನ್ನಡಿಗರಿಗೆ ಅಪಾರವಾದ ಉಪಕಾರ ಮಾಡಿದ್ದಾರೆ ಮಾತ್ರ ಇದರ ಪ್ರಕಾಶಕತ್ವದ ಮೂಲಕ ಎಲ್ಲ ಹಕ್ಕುಗಳನ್ನು ನಮಗೆ ನೀಡಿದ್ದಾರೆ ತಾವು ಮಾತ್ರ ವಿಶ್ರಾಂತಿ ಬೇಡಿದ್ದಾರೆ ಆದ್ದರಿಂದ ಇವರ ಈ ಗ್ರಂಥಕ್ಕೆ ಮಹಾ ಮಹಾ ಪಂಡಿತರಿಂದ ಮತ್ತು ಪೂಜ್ಯವಾದರಿಂದ ಬರೆದು ಬಂದ ಸಂದೇಶ ಮುನ್ನುಡಿ, ಪ್ರಸ್ತಾವ ನಿರೂಪಣೆ ಮೊದಲಾದವುಗಳನ್ನು ನಾವು ನೋಡಿದರೆ-- "ಚಿರಕಾಲ ಚಿಜ್ಯೋತಿ" "ಉದ್‌ಗ್ರಂಥ" "ಗ್ರಂಥರತ್ನ" "ಆಧಾರಗ್ರಂಥ" "ಸತ್‌ಕೃತಿ" ಮುಂತಾದ ಪದಭೂಷಿತವಾದ ಈ ಪುಸ್ತಕದ ಮೈಮೆಯು ಸಾಮಾನ್ಯರಿಗೂ ಕೂಡ ಚನ್ನಾಗಿಯೇ ತಿಳಿಯಬರುತ್ತದೆ, ಹಾಗು ಈ ಗ್ರಂಥಕಾರರ ಬಗೆಗೆ ಸಂದಿದ—

"ವೀರಶೈವ ತತ್ವವಿಶಾರದ" "ಕನ್ನಡ ಕುಲಭೂಷಣ" "ಸಮಾಜ ವಿಘಾತಕ ಪಕ್ಷ ಸಂಗಡಗಳ ಬಲೆಗೆ ಶಿಲುಕದ,"ಉಜ್ವಲ ಧರ್ಮಾಭಿಮಾನಿ" "ವಿಮರ್ಶಕ" "ಪಂಡಿತ" ಇಂದಿನ ವೈಜ್ಞಾನಿಕರಲ್ಲಿ ತತ್ವಾಭಿಜ್ಞ ದೀಪ್ತಿ-ಯನ್ನು ಮೂಡಿಸಲು ಕಾರಣ"

ಎಂಬಿವೇ ಮೊದಲಾದ 'ಪ್ರಶಸ್ತಿ'ಗಳನ್ನು ವಿಚಾರಮಾಡಿದಲ್ಲಿ-- ಇವರ ಗೌರವವು ಒಡೆದು ಕಾಣುತ್ತದೆ ಎಂಬುದು ಈ ಗ್ರಂಥದ ಒರೆಹಗಾರಿಕೆಯ ಪ್ರಭಾವದಿಂದಲ್ಲದೆ ಮತ್ತೇನು ?

ಇದರ ಮೇಲಿಂದ ಮೇಲ್ಕಂಡ ಈ ಗ್ರಂಥವು ಇಷ್ಟೊಂದು ಮಹತಿ-ಯುಳ್ಳದ್ದು ಇರುವದೆಂದು ತಿಳಿಯುವವರಿಂದಲೇ ಇದು ಸರ್ವರಿಂದಲೂ ಸಂಗ್ರಾಹ್ಯವೆಂದು ಬೇರ ಹೇಳಲಿಕ್ಕ ಬೇಡ !

ಆದ ಕಾರಣವಾಗಿ ಗ್ರಾಹಕರುಮಾತ್ರ ಈ ಗ್ರಂಥದ ಕೆಲವು ಪ್ರತಿಗಳನ್ನಾದರೂ ಶಕ್ಯವಿದ್ದಮಟ್ಟಿಗೆ ಪ್ರತಿಯೊಬ್ಬರೂ ಮೂಲ್ಯಕ್ಕೆ ಸಂಗ್ರಹಿಸಿ, ಜನತೆಯಲ್ಲಿ ಮೂಲ ಬೆಲೆಗೆ ಪ್ರಯತ್ನದಿಂದ ಪ್ರಸಾರಗೊಳಿಸಿ, ತಮ್ಮ ಅಸಲು ಗಂಟು ಮಾಡಿಕೊಂಡಲ್ಲಿ, ತಮ್ಮ ಕೈಯಿಂದ ವಿಶೇಷ ಖರ್ಚು ಬಾರದಿದ್ದರೂ, ತಾವು ಒಂದು ರೀತಿಯಿಂದ ಮಹತ್ವದ ಧರ್ಮಪ್ರಸಾರ ಕಾರ್ಯವನ್ನು ಬೇಗನೇ ಮಾಡಲು ನೆರವಾದಂತಾಗುವದು

ಆದಕಾರಣವಾಗಿ ಇಂಥ ಅಮೂಲ್ಯ ಸಮಯದ ಬೆಲೆಯರಿತು, ಧರ್ಮವಂತರಾದ ಪ್ರತಿಯೊಬ್ಬ ಸಮಾಜಾಭಿಮಾನಿಗಳು ಇದಕ್ಕ ಗಮನ ಕೊಟ್ಟು, ಇತ್ತ ಕಡೆಗೆ ತಮ್ಮ ನಿಜದೃಷ್ಟಿಯನ್ನು ನೀಡುವರೆಂದು ಬಯಸುವೆವು

ಪ್ರಕಾಶಕರು

———

# ವಿಷಯಾನುಕ್ರಮಣಿಕೆ





ಶ್ರೀಗುರುಭ್ಯೋನಮಃ

# ಸ್ವಾತಂತ್ರ್ಯದ ಅನಾದಿತ್ವ

ಅಥವಾ

## ವೈದಿಕ ತಾಂತ್ರಿಕ ರಹಸ್ಯ

---

ನಮ್ಮ ಭಾರತದ ಬಹುಭಾಗದಲ್ಲಿ "ಧರ್ಮಸ್ವಾತಂತ್ರ್ಯ, ಧರ್ಮ ಸ್ವಾತಂತ್ರ್ಯ" ವೆಂಬ ಕೂಗು ಕೇಳಬರುತ್ತಿದೆ ಇದು ಜಾತ್ಯಾತೀತವಾದ ರಾಷ್ಟ್ರಾಧಿಕಾರದ ದೆಸೆಯಿಂದ ಬಂದಿರುವ ಸ್ವಾತಂತ್ರ್ಯದ ಉದ್ಘೋಷ ವೆಂದೇ ಹೇಳಬೇಕಾಗುತ್ತಿದೆ

ಭಾರತವು ಸ್ವತಂತ್ರವಾಗುವದಕ್ಕೆ ಆದರ ನಾಯಕರು ಮೊಟ್ಟ ಮೊದಲು ಕಲ್ಪಿಸಿದ ಅನೇಕ ಮಂಗಲ ಗುಣಗಳಲ್ಲಿ ಜಾತ್ಯಾತೀತವೆಂಬ ಉಜ್ವಲ ಗುಣವೇ ಬಹು ಮುಖ್ಯವಾಗಿದೆ. ಇಂತಹ ಅಮೂಲ್ಯ ಗುಣ ರತ್ನಗಳನ್ನು ಅವರು ಆತ್ಮೀಯವಾದ ಭಾರತೀಯ ಧರ್ಮಾಂಬುಧಿಯಿಂ ದಲೇ ಉದ್ಧರಿಸಿದರೆಂಬುದು ತೀರ ನಿಜವು ಅವರು ಅವುಗಳನ್ನು ಆಚರ ಣೆಯಲ್ಲಿ ತಂದು ಅಜರಾಮರ ಕೀರ್ತಿ ಮೂಲವಾದ ಸ್ವಾತಂತ್ರ್ಯವನ್ನು ನಿಖಿಲ ಜನತೆಗೆ ಒದಗಿಸಿದುದು ಸಾಮಾನ್ಯವಾದುದೇ?

ರಾಷ್ಟ್ರಘಟನೆಗೆ ಮೂಲಕಾರಣವಾದ ಇಂತಹ ಸ್ವಾತಂತ್ರ್ಯವು ಭಾರತೀಯ ಧರ್ಮದಲ್ಲಿ ಎಂದಿನಿಂದ ಬಂದಿತು? ಎಂಬ ಪ್ರಶ್ನೆಗೆ ಉತ್ತರ ವಾಗಿ ಕೆಲವರು—

"ಇತಿಹಾಸದಲ್ಲಿ ಮಹಾವೀರಸ್ವಾಮಿ, ಬುದ್ಧದೇವರುಗಳು ತಮ್ಮ ಅಭಿಪ್ರಾಯಗಳನ್ನು ಪ್ರಸಾರ ಮಾಡುತ್ತ, ಜೈನ, ಬೌದ್ಧ ಧರ್ಮಗಳನ್ನು ಉದ್ಧಾರ ಮಾಡಿದರು, ಇವೆರಡು ಒಂದೊಂದು ಮತಗಳಾದವು, ಇವು ವೈದಿಕ ವಾಙ್ಮಯವನ್ನು ನಿರಾಕರಿಸಿದವು ಇದೇ ಹಿಂದೂಧರ್ಮದಲ್ಲಿ "ಸ್ವತಂತ್ರಾಭಿಪ್ರಾಯದ ಕಾಲವೆಂದು ಧಾರಾಳವಾಗಿ ಊಹಿಸಿ ಹೇಳಬ ಹುದು" ಎಂಬುದಾಗಿ ಹೇಳತೊಡಗಿದ್ದಾರೆ

ಆದರೆ ಹಿಂದೂಧರ್ಮದಲ್ಲಿ ಹಿರಿಮೆಯಲ್ಲಿ ಮುಂದೆ ಬಂದಿರುವ ವೀರಶೈವ ಮತವಾದರೋ ವೈದಿಕ ವಾಙ್ಮಯದಲ್ಲಿ ವೈದಿಕೋತ್ತಮವಾ ಗಿದ್ದು, ಜಾತ್ಯಾತೀತ ವರ್ತನೆಯಿಂದ ಮಂಗಲಗುಣ ರತ್ನಗಳಿಗೂ, ನಿಖಿಲ ಮಾನವರಿಗೂ ಆವಾಸವೆನಿಸಿ ಸಮುದ್ರದಂತೆ ಗಂಭೀರವಾಗಿದೆ ಆದಕಾರಣ ವಿದು ವಿಶ್ವಧರ್ಮವೇ ಆಗಿದೆ ಆದುದರಿಂದಲೇ ಇದು ಸ್ವಾತಂತ್ರ್ಯದ ಅನಾದಿತ್ವವನ್ನು ಎಂದಿನಿಂದಲೂ ಸಮರ್ಥಿಸುತ್ತಿದೆ ಇದುವೇ ವೈದಿಕ ತಾಂತ್ರಿಕ ರಹಸ್ಯವು ಇದನ್ನುಪಕ್ರಮಿಸಿದುದೇ ಈ ಬರವಣಿಗೆಯ ಮುಖ್ಯೋದ್ದೇಶವಾಗಿದೆ.

## ವೀರಶೈವದ ಉಗಮ ಶಿವಾಗಮ

ವೀರಶೈವ ಸಾಹಿತ್ಯದಲ್ಲಿ ವೇದಾಗಮಗಳೂ, ಭಾಷ್ಯಾದಿ ಗ್ರಂಥಗಳೂ, ಕನ್ನಡ ವಚನವಾಙ್ಮಯವೂ, ಇನ್ನಿತರ ಕನ್ನಡ ಸಾಹಿತ್ಯವೂ, ತಮಿಳು, ಆಂಧ್ರ, ಮಹಾರಾಷ್ಟ್ರ ಮುಂತಾದ ವಾಙ್ಮಯವೂ ಒಂದುಗೂಡಿವೆ ಹಿಂದೂಧರ್ಮದಲ್ಲಿ ಮುಂದೆ ಬಂದಿರುವ ವೀರಶೈವ ಸಾಹಿತ್ಯವು ಸಂಸ್ಕೃತ ಭಾಷಾಮಯವಿದ್ದುದು ಕೂಡ ವೀರಶೈವರ ವೈಶಿಷ್ಟ್ಯವೆಂದೇ ಹೇಳಬೇಕಾ ಗುವದು. ಇಂತಪ್ಪೀ ಸಾಹಿತ್ಯಕ್ಕೆ ಭಿನ್ನಾಭಿಪ್ರಾಯವಿಲ್ಲದೆ ಏಕವಾಕ್ಯ ತೆಯು ಮಾತ್ರ ಆವಶ್ಯಕವಾದುದೆಂದು ಬೇರೆ ಹೇಳಬೇಕಾಗಿಲ್ಲ ಇಂತೀ

ಸಾಹಿತ್ಯದಲ್ಲಿ ಆತ್ಮೀಯವಾದ ಸಂಸ್ಕೃತಿ ಅಥವಾ ಸಭ್ಯತೆಯನ್ನು ಕಂಡು ಕೊಳ್ಳುವದು ಸರ್ವರ ಪ್ರಥಮ ಕರ್ತವ್ಯವಾಗಿದೆ,

ಈ ವೀರಶೈವ ಸಾಹಿತ್ಯದಲ್ಲಿ ವೇದಗಳೂ, ಆಗಮಗಳೂ, ಸರ್ವ-ಲೋಕೋಪಕಾರಕಗಳಾಗಿ, ಅತ್ಯಂತ ಮೇಲ್ತರಗತಿಯವಾಗಿವೆ. ವೀರಶೈವರಿಗೆ ವೇದವು ಮುಖ್ಯವಾಗಿದ್ದು, ಅದರ ಅರ್ಥದಂತೆ ಸ್ಪಷ್ಟವಿವರಣೆಯುಳ್ಳ ಶಿವಾಗಮಗಳೂ ಮುಖ್ಯವಾಗಿವೆ 'ಅರೇಅಸ್ಯ ಮಹತೋಭೂತಸ್ಯ ನಿಶ್ವಸಿತಮೇತದೃಗ್ವೇದೋ ಯಜುರ್ವೇದ ಸ್ಸಾಮವೇದೋಽ ಥರ್ವಣಃ" ಎಂಬ ಉಪನಿಷದ್ವಚನದಂತೆ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳು ಮಹಾಭೂತನಾದ ಪರಶಿವನ ಶ್ವಾಸರೂಪಗಳಾಗಿರುತ್ತವೆ ಶ್ವಾಸವೆಂದರೆ ಉಸಿರು, ಆದುದರಿಂದ ಇವು ಅಸ್ಪಷ್ಟೋಚ್ಚಾರವುಳ್ಳವುಗಳು ಇವೆ ಇಂತು ಶಿವನಶ್ವಾಸ ಭೂತವಾದ ವೇದಗಳಲ್ಲಿ ಪ್ರತಿಪಾದಿತವಾದ ವೀರಶೈವವು, ಅಸ್ಪಷ್ಟವಾಗಿದ್ದರೂ, ಶಿವಾಗಮಗಳಲ್ಲಿ ಸ್ಪಷ್ಟವಾಗಿದೆ. ಈ ಬಗ್ಗೆ (ಕ್ರಿ ಶ. ೧೪೦೦ರಲ್ಲಿದ್ದ) ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ ಕ್ರಿಯಾಸಾರದಲ್ಲಿ—

"ಕಾಮಿಕಾದ್ಯಾವಾತುಲಾಂತಾ ಶ್ಶೈವೇನೋಕ್ತಾಶ್ಶೈವಾಗಮಾಃ ||
ಈಶಾನವಕ್ತ್ರಸಂಜಾತಾಸ್ಸಾಕ್ಷಾದ್ದೇವಸ್ಯ ಶೂಲಿನಃ || ೨ ||
ತಾಲ್ವೋಷ್ಠ ದಂತ ವ್ಯಾಪಾರ ಪುರಸ್ಸರ ಮಿಮೇಸಮೇ ||
(ಕ್ರಿ ಸಾ. ಉ ೨೯)

ಕಾಮಿಕವೆ ಮೊದಲ್ಗೊಂಡು, ವಾತುಲಾಗಮವೆ ಕಡೆಯದಾದ ೨೮ ಶಿವಾಗಮಗಳು ಸಾಕ್ಷಾದೀಶಾನ ಮುಖದಿಂದ ತಾಲು ಓಷ್ಠ ದಂತ ವ್ಯಾಪಾರ ಪುರಸ್ಕೃತವಾಗಿವೆ" ಎಂದು ಉಪದೇಶಿಸಿರುವರು ಮತ್ತು

"ಶ್ವಸಿತಾನಾಂ ಶ್ರುತೀನಾಂ ಚೇತ್ತಾದೃಶೋ ಮಹಿಮಾಯದಿ ||
ತಾಲ್ವೋಷ್ಠಪುಟನಿಷ್ಪಂದ ಪುರಸ್ಸರ ಮುದೀರಿತೆ || ೩ ||
ಆಗಮೇ ಶಿವಕ್ತ್ರೋತ್ಥೇ ವಕ್ತವ್ಯೋ ಮಹಿಮಾಕಿಯಾನ್ ||
(ಕ್ರಿ ಸಾ ಉ ೨೯)

ಶ್ವಾಸಭೂತಶ್ರುತಿಗಳಿಗೇ ತಾದೃಶ ಧರ್ಮಬೋಧಕ ರೂಪಮಹಿಮೆ ಇದ್ದರೆ, ತಾಲುಓಷ್ಠ ಪುಟಾದಿಗಳ ಸ್ಫುರಣ ಪುರಸ್ಸರವಾಗಿ ಹೊರಹೊರಟ ಶಿವವಕ್ತ್ರ ಸಂಭೂತವಾದ ಶಿವಾಗಮಕ್ಕೆ ಎಷ್ಟು ಮಹಿಮೆಯನ್ನು ಹೇಳ ಹೇಳಬೇಕಾಗುವುದು ? ” ಎಂದೂ ಪ್ರತಿಪಾದಿಸಿರುವರು

ಇದರ ಮೇಲಿಂದ ವೇದಗಳಿಗಿಂತ ಆಗಮಗಳು ಎಷ್ಟು ಶ್ರೇಷ್ಠೋ-ಚ್ಚಾರವುಳ್ಳವು ಎಂದು ತಿಳಿವಹಾಗಿದೆ ಮೊಗ್ಗಿಮಾಯಿದೇವರು ತಮ್ಮ ಅನುಭವ ಸೂತ್ರದಲ್ಲಿ—

“ ಷಟ್‌ಸ್ಥಲ ನಿರ್ಣಯವುಳ್ಳ ವೀರಶೈವ ಸಿದ್ಧಾಂತ ಶಾಸ್ತ್ರವನ್ನು, ಹೇಳುವಲ್ಲಿ— ಶ್ರುತಿ-ಸ್ಮೃತಿ ಶಿವಧರ್ಮಸಂಹಿತೆ ಮೊದಲಾದ ಶಾಸ್ತ್ರಗಳು, ಎಲ್ಲ ಉಪನಿಷತ್ತುಗಳು, ಎಲ್ಲ ಪುರಾಣಗಳು ಸಮರ್ಥಗಳಾಗಿದ್ದು, ಶಿವಾಗಮಗಳೇ ಶಿವಾದ್ವೈತ ಸಿದ್ಧಾಂತ ಪ್ರತಿಪಾದಕಂಗಳೆಂಬಲ್ಲಿ— ಪಾರಮಾ-ರ್ಥಿಕಗಳಾಗಿದ್ದು” ಎಂಬುದು ಈ ಕೆಳಗಣ ಶ್ಲೋಕಗಳಿಂದ ತಿಳಿಯುತ್ತಿದೆ

“ಶ್ರುತಿ-ಸ್ಮೃತೀ ತಿಹಾಸೈಶ್ಚ ಶಿವಧರ್ಮಾದಿ ಶಾಸ್ತ್ರಕೈಃ ||
ಕಥ್ಯತೇ ಶಿವಶಿದ್ಧಾಂತ ತಂತ್ರಂ ಷಟ್‌ಸ್ಥಲ ನಿರ್ಣಯಂ ||
ಶಿವಾಗಮೈಶ್ಶಿವಾದ್ವೈತ ರಹಸ್ಯೈಃ ಪಾರಮಾರ್ಥಿಕೈಃ ||
ಕಥ್ಯತೇ ಶಿವಸಿದ್ಧಾಂತ ತಂತ್ರಂ ಷಟ್‌ಸ್ಥಲನಿರ್ಣಯಂ ||
ಸರ್ವೈರುಪ ನಿಷದ್ವಾಕ್ಯೈಃ ಪುರಾಣೈರುತ್ತರಾರ್ಥಕೈಃ ||
ಕಥ್ಯತೇ ಶಿವಸಿದ್ಧಾಂತ ತಂತ್ರಂ ಷಟ್‌ಸ್ಥಲ ನಿರ್ಣಯಂ || ”

ವೇದ ತತ್ವಗಂಭೀರರಾದ ವ್ಯಾಸಮುನಿವರ್ಯರು “ಶಿವಪುರಾಣ” ವಾಯ ವೀಯದಲ್ಲಿ ಹೀಗೆ ಹೇಳಿದ್ದಾರೆ —

“ಪರಧರ್ಮ ಅಪರ ಧರ್ಮಗಳೆಂಬೆರಡು ಧರ್ಮಗಳು ಹೇಳಲ್ಪಟ್ಟಿದ್ದು ಅವೆರಡರಲ್ಲಿ ಆದ್ಯವಾದ ಯಾವ “ಶ್ರೀಷ್ಠಾನುಷ್ಠಾನ” ವೆಂದು ಶಬ್ದವುಳ್ಳ “ಪರಧರ್ಮ” ವುಂಟೋ ಅದು ಇತಿಹಾಸ ಪುರಾಣಗಳಿಂದ ಹೇಗೋ ಉಪ ಬೃಂಹಿತವಾಗಿದೆ ಆದರೆ ಆ ಪರಧರ್ಮವು ಶೈವಾಗಮಗಳಲ್ಲಿಯಾದರೋ-

ಅಂಗೋಪಾಂಗ ವಿಸ್ತರದೊಡನೆ ಹೇಳಲ್ಪಟ್ಟಿದೆ " ಎಂಬೀ ವಿಷಯವು ಕೆಳಗಣ ಶ್ಲೋಕಗಳಿಂದ ತಿಳಿಯುತ್ತಿದೆ —

ತತ್ರಾದ್ಯೋಯಃ ಪರೋಧರ್ಮಃ ಶ್ರೇಷ್ಠಾನುಷ್ಠಾನ ಶಬ್ದಿತಃ ||
ಇತಿಹಾಸ ಪುರಾಣಾಭ್ಯಾಂ ಕಥಂ ಚಿದುಪ ಬೃಂಹಿತಃ || ೯ ||
ಶೈವಾಗ ಮೈಸ್ತು ಸಪುನಃ ಸಹಾಂಗೋಪಾಂಗ ವಿಸ್ತರಃ ||

(ವಾ. ಪೂರ್ವಭಾಗ ಅಧ್ಯಾಯ ೨೮)

ಇದರ ಮೇಲಿಂದ ಪರಧರ್ಮ ಮತ್ತು ಪಾಶುಪತಾದಿ ಪರ್ಯಾಯ ನಾಮವುಳ್ಳ ವೀರಶೈವವು, ಇತಿಹಾಸ ಪುರಾಣಗಳಿಗಿಂತ ಶೈವಾಗಮ-ಗಳಿಂದಲೇ ಸಾಂಗೋಪಾಂಗವಾಗಿ ಹೇಳಲ್ಪಟ್ಟಿದೆ, ಎಂದು ತಿಳಿಯುತ್ತದೆ ಈ ಬಗ್ಗೆ ಶ್ರೀಯುತ ವೀರಪ್ಪ ಬಸವಪ್ಪ ಬಳಿಅಂಗಡಿ, ಬಿ ಏ , ಎಲ್‌ಎಲ್‌ಬಿ ವಕೀಲ ಹುಬ್ಬಳ್ಳಿ ಇವರು ತಮ್ಮ " ವೀರಶೈವರಲ್ಲಿ ಜಾತಿಭೇದಗಳಿಲ್ಲ " ಎಂಬ ಗ್ರಂಥದ ಆರನೆಯ ಪುಟದಲ್ಲಿ—

" ಇಂತಹ ಉದಾರ ತತ್ವಗಳ ಆಧಾರಸ್ತಂಭದ ಮೇಲೆ ವೀರಶೈವ ಧರ್ಮವು ನೆಲಸಿರುತ್ತದೆ ಸರ್ವಪ್ರಾಣಿಗಳಿಗೂ ಮುಕ್ತಿಯು ದೊರೆಯು-ಬೇಕೆಂದು ಆ ಕರುಣಾ ಸಮುದ್ರನಾದ ಪರಶಿವನು ೨೮ ವಿದ್ಯಾಗಮಗಳನ್ನು (ಶೈವ ಶಾಸ್ತ್ರಗಳನ್ನು) ಹೇಳಿರುವನು ಅಂತಹ ಶೈವಾಗಮಗಳೇ ವೀರ ಶೈವಮತದ ಉಗಮಸ್ಥಾನವಾಗಿವೆ " ಎಂದು ಅಭಿಪ್ರಾಯಪಟ್ಟಿದ್ದಾರೆ ಅದು ಕಾರಣ ಶ್ರೀರೇಣುಕವಾದರು—

ಸಿದ್ಧಾಂತಾಖ್ಯೇ ಮಹಾ ತಂತ್ರೇ ಕಾಮಿಕಾದ್ಯೇ ಶಿವೋದಿತೇ ||
ನಿರ್ದಿಷ್ಟ ಮುತ್ತರೇಭಾಗೇ ವೀರಶೈವ ಮತಂ ಪರಂ ||

ಸಿ ಶಿ ಪ ೫ ಶ್ಲೋ ೧೪

" ಸಿದ್ಧಾಂತ, ವೆಂಬುದು ಶಿವಾಗಮದ ಪರ್ಯಾಯನಾಮವು ಕಾಮಿಕಾಗ ಮವೆ ಮೊದಲಾದ ಶಿವೋಕ್ತ ಸಿದ್ಧಾಂತಾಖ್ಯವಾದ ಮಹಾ ತಂತ್ರದಲ್ಲಿ ಉತ್ತರ ಭಾಗದಲ್ಲಿ ಪರವಾದ ವೀರಶೈವವು ನಿರ್ದಿಷ್ಟವಾಗಿದೆ " ಎಂದು ಅಪ್ಪಣೆಗೈದಿರುವರು ಅದುಕಾರಣ ವೀರಶೈವದ ಉಗಮವು ಶಿವಾಗಮ-ಗಳಿಂದಲೇ ಎಂಬುದು ಸುಸ್ಪಷ್ಟವಾಗುತ್ತಿದೆ.

# ಶಿವಾಗಮಗಳ ಪ್ರಶಸ್ತಿ

ಕಾಮಿಕಾದಿ ವಾತುಲಾಂತವಾದ ೨೮ ಸಂಖ್ಯೆಯುಳ್ಳ ಶಿವಾಗಮಗಳು ಶಿವೋಕ್ತವಾದುದರಿಂದ ಪರಮ ಪ್ರಮಾಣಗಳಾಗಿವೆ. ಭಾರತವ ಆಸ್ತಿಕ-ರಲ್ಲಿ ಮುಖ್ಯರಾದವರಿಗೆ ಇವುಗಳ ಮೈಮೆಯು ಗೊತ್ತುಂಟು

**ಶ್ರೀವೇದವ್ಯಾಸ ಮಹರ್ಷಿಗಳು—** "ಶಿವಾಗಮವನ್ನು ಅರಿಯ ಬೇಕಾದರೂ, ಮತ್ತು ಓದಬೇಕಾದರೂ, ಹಾಗು ಕೇಳಬೇಕಾದರೂ "ದೇಶಿಕಾದೇಶ"ವೆಂಬ ಗುರುಕಾರುಣ್ಯರೂಪ ದೀಕ್ಷೆಯಿಲ್ಲದೆ ಅಧಿಕಾರವಿಲ್ಲ ಆದುಕಾರಣ ಅವುಗಳನ್ನು ಸ್ವೇಚ್ಛೆಯಿಂದಾಗಲಿ, ಗುರುಮುಖದಿಂದ ಹೊರತಾದ ಬೇರಾವರೀತಿಯಿಂದಾಗಲೂ ತಿಳಿಯಕೂಡದು ಎಂದು ಹೇಳಿರುವರು ಪ್ರಮಾಣವಿದು ಉತ್ತರವಾಯವೀಯದಲ್ಲಿದ್ದು, ಈ ಕೆಳಗೆ ಉದ್ಧರಿಸಿದೆ—

ಶಿವಾಗಮಸ್ಯಗ್ರಹಣಂ ವಾಚನಂ ಶ್ರವಣಂತಥಾ ||
† ದೇಶಿಕಾದೇಶತಃ ಕುರ್ಯಾನ್ನ ಸ್ವೇಚ್ಛಾತೋನಚಾನ್ಯತಃ ||
(ಶಿವಪುರಾಣ ಉ. ವಾಯವೀಯ ಅ ೧೬ ಶ್ಲೋ ೭೭ ಮುಂಬಯಿ ಪ್ರತಿ)

ಇದರ ಮೇಲಿಂದ ಶಿವಾಗಮಗಳಿಗಿದ್ದ ಗೌರವವು ಒಡದು ಕಾಣುತ್ತಿದೆ ಇವುಗಳಿಗೆ **ಸಾಕ್ಷಾತ್** ಮಹೇಶ್ವರನೇ ಕರ್ತನೆಂಬುವಕ್ಕೆ ಸೂತಸಂಹಿತೆಯು—

ಅಷ್ಟಾದಶ ಪುರಾಣಾನಾಂಕರ್ತಾ ಸತ್ಯವತೀಸುತಃ ||
ಕಾಮಿಕಾದಿ ಪ್ರಭೇದಾನಾಂ ಯಥಾದೇವೋ ಮಹೇಶ್ವರಃ ||

ಎಂಬುದಾಗಿ ಸಾರಿದೆ ಇದರರ್ಥವು- ಸತ್ಯವತೀ ಸುತನಾದ ವ್ಯಾಸಮುನಿಯು ೧೮ ಪುರಾಣಗಳಿಗೆ ಹೇಗೆ ಕರ್ತನೋ ಹಾಗೆ ಕಾಮಿಕ ಮೊದ

---

† ಯೋ ವಿದ್ಯಾಸಂತತಿಜ್ಞಾನ ಸಹಿತೊ ದೇಶಿಕೋಭವೇತ್ ||
ಸೋ ನಾಯಾಸೇನ ಸಂಸಾರಾನ್ನೃಣಾ ಮುತ್ತಾರಕೋಭವೇತ್ ||
—ಸೂತಸಂ ಯ ವೈ ೩ ಅ ೩೫

ಲಾದೆ ಪ್ರಭೇದವುಳ್ಳ ಶಿವಾಗಮಗಳಿಗೆ ಮಹೇಶ್ವರನು ಕರ್ತನಿದ್ದಾನೆ" ಎಂಬುದಾಗಿದೆ

ಈ ಸೂತಸಂಹಿತೆಗೆ ಮಾಧವಾಚಾರ್ಯರು ತಮ್ಮಿಂದ ಬರೆಯಲ್ಪಟ್ಟ ವ್ಯಾಖ್ಯಾನದಲ್ಲಿ ಹೀಗೆ ಹೇಳಿದ್ದಾರೆ– " ಕಾಮಿಕಾದೀ ನಾಮಾಗಮಸಂಹಿತಾನಾಂ ಶಿವೇನೈವ ಪ್ರಣಯನಾತ್ ಪ್ರಾಮಾಣ್ಯೇಯಥಾ ವಿಶ್ರಂಭಃ, ಏವಂ ನಾರಾಯಣಾವತಾರೇಣ ವ್ಯಾಸೇನ ಪ್ರಣಯನಾತ್ ಪುರಾಣೇ ಷ್ಯವಿಶೇಷಃ" ಕಾಮಿಕಾದಿ ಶಿವಾಗಮ ಸಂಹಿತೆಗಳು ಶಿವನಿಂದಲೇ ಬರೆಯಲ್ಪಟ್ಟಿರುವದರಿಂದ ಪ್ರಾಮಾಣ್ಯ ವಿಷಯದಲ್ಲಿ ಅಬಾಧಿತವಾದ ವಿಶ್ವಾಸವುಂಟಾಗುತ್ತಿದೆ ಈ ಪ್ರಕಾರ ನಾರಾಯಣಾವತಾರಿಯಾದ ವ್ಯಾಸರಿಂದ ಬರೆಯಲ್ಪಟ್ಟ ಪುರಾಣಗಳಲ್ಲಿಯಾವರೂ ಪ್ರಾಮಾಣ್ಯವು ಅವಿಶೇಷವಾಗಿದೆ

ಇದರ ಮೇಲಿಂದಂತೂ ಶಿವಾಗಮ ಪ್ರಾಮಾಣ್ಯವೂ, ಅವುಗಳ ವೈದಿಕತೆಯೂ ಒಡೆದು ಕಾಣುತ್ತಿದೆ ಶಿವರಹಸ್ಯದ ೧೭ನೇ ಅಧ್ಯಾಯದಲ್ಲಿ

ಶಿವಾಗಮಮಿದಂ ಪುಣ್ಯಂ ಶ್ರುತಿಸಾರಂ ವಿಮುಕ್ತಿದಂ ||
ತಸ್ಮಾತ್‌ಸದಾ ಸೇವನೀಯಂ ಭಕ್ತ್ಯಾ ವಿಪ್ರಾದಿಭಿರ್ದ್ವಿಜಾಃ ||

ಶಿವಾಗಮವಿದು ಪುಣ್ಯವಾದುದೂ ಶ್ರುತಿಸಾರವೂ, ಮುಕ್ತಿಪ್ರದವೂ ಇರುವುದರಿಂದ ಭಕ್ತಿಪೂರ್ವಕವಾಗಿ ಎಲ್ಲ ಕಾಲದಲ್ಲಿಯೂ ಬ್ರಾಹ್ಮಣಾದಿಗಳಿಂದ ಸೇವ್ಯವಾಗಿರುವದು ಇದರಿಂದ ಶ್ರುತಿಸಾರವಾದುದೀ ಶಿವಾಗಮವೆಂದು ಕಂಡುಬರುವದರಿಂದ ಪರಮವೈದಿಕವಾಗಿದೆ ಎಂಬುದು ತಾತ್ಪರ್ಯವು ‡

ಅದ್ವೈತಮತ ಭಾಷ್ಯಕಾರರಾದ ಶ್ರೀ ಶಂಕರಾಚಾರ್ಯರು ತಮ್ಮ ಪ್ರಪಂಚಸಾರ ಮೊದಲಾದ ಗ್ರಂಥಗಳಲ್ಲಿ, ಗಾಯತ್ರೀ ಷಡಕ್ಷರೀ ತ್ರ್ಯಂಬಕಾದಿ ಮಂತ್ರಗಳ ಮುದ್ರಾಪುರಶ್ಚರಣ ಪ್ರಯೋಗಾದಿಗಳಿಗೆ ಶ್ರೀಶಿವಾಗಮಗಳಿಂದಲೇ ಅಂಗಾವರಣಾದಿಗಳನ್ನು ಸಮರ್ಥಿಸಿರುವರು ಜಗತ್ಪ್ರಸಿದ್ಧ "ಶಿವಾಂಕ" ದ ೧೫೬ ನೆಯ ಪುಟದಲ್ಲಿ ಶ್ರೀ ಶಂಭುಲಿಂಗಜೀ ಶಿವಾಚಾರ್ಯ

‡ ವೀ ಶೈ ಮ ಪ್ರಾ ಪು ೨೭ ರಿಂದ

ಮಹಾರಾಜ ಬೃಹನ್ಮರ ಇವರು ತಮ್ಮ "ಶೈವಾಗಮ" ವೆಂಬ ಲೇಖದಲ್ಲಿ ಹೀಗೆ ಹೇಳಿದ್ದಾರೆ—

ಆದ್ಯ ಶಂಕರಾಚಾರ್ಯನೆ "ಗಾಯತ್ರೀ ಪುರಶ್ಚರಣ ಪದ್ಧತಿ" ನಾಮಕ ಅಪನೇ ಗ್ರಂಥಮೇ ಪುರಶ್ಚ್ರಿಯಕೆ ಮುಖ್ಯ ಪಂಚಾಂಗ ಕಾ ನಿರೂಪಣ ಕರತೇ ಹುಯೆ ಲಿಖಾ ಹೈ—

ಜಪಾರ್ಚಾ ಪೂರ್ವಕೋ ಹೋಮಸ್ತರ್ಪಣಂ ಚಾಭಿಷೇಚನಂ ||
ಭೂದೇವ ಭೋಜನಂಚೈವಂ ಪ್ರಕಾರೈಷು ಪುರಶ್ಚ್ರಿಯಾ ||
ಇತಿ ಪಂಚಾಂಗತಸ್ಸಿದ್ಧಂ ಮಂತ್ರಿ ಶೀಘ್ರ ಮವಾಪ್ನುಯಾತ್ ||
ತೇಜಸ್ವೀ ಬ್ರಹಮ ವರ್ಚಸ್ವೀ ನಿಗ್ರಹಾನುಗ್ರಹಕ್ಷಮಃ ||
ಭವೇದಚಿರ ಕಾಲೇನ ಸತ್ಯಂ ಜಾನೀಹಿ ಪಾರ್ವತಿ ||

( ಇತಿ ಸ್ವರವಾಕ್ಯಂ )

ಇನ್ ಶೈವಾಗಮ ವಾಕ್ಯೋಂಕಾ ಉಲ್ಲೇಖಕರಕ ತಥಾ ಗ್ರಂಥಕ ಉಪಸಂಹಾರಮೇ "ವತ್ಸರಾದರ್ವಾಕ್ ಸಿದ್ಧಿರ್ಜಾಯತೆ ತಮುಕ್ತಂ ಶಿವಶಾಸನೆ" ಐಸಾಕಹಕರ ಶೈವಾಗಮ ವಾಕ್ಯೋಂಕೊ ಹಿ ಪ್ರದರ್ಶಿತ ಕಿಯಾಹೈ

ಇದರಿಂದ ಆದ್ಯ ಶಂಕರಾಚಾರ್ಯರು ತಮ್ಮ "ಗಾಯತ್ರೀ ಪುರಶ್ಚರಣ-ಪದ್ಧತಿ" ಎಂಬ ಗ್ರಂಥದಲ್ಲಿ "ಜಾನೀಹಿ ಪಾರ್ವತಿ" ಇತ್ಯಾದಿ ಶಿವಾ-ಗಮವಚನಗಳನ್ನೆ ಪುರಸ್ಕರಿಸುತ್ತ ಕೊನೆಯಲ್ಲಿ "ಶಿವಶಾಸನ" ವಾದ ಶಿವಾಗಮವನ್ನೆ ಆಧಾರಕ್ಕಿಟ್ಟುಕೊಂಡಿರುವುದು ವಿಶದವಾಗಿ ತಿಳಿಯುತ್ತಿದೆ

ಶ್ರೀಹರದತ್ತಾಚಾರ್ಯರು—

ವೇದಃ ಪ್ರಮಾಣಮಿತಿ ಸಂಗಿರಮಾಣ ಏವ |
ದಿವ್ಯಂತವಾಗಮ ಮುಪೈತಿಜನಃ ಪ್ರಮಾಣಂ ||

ಎಂದು ಹೇಳಿರುವರು. ಇದರಿಂದ ವೇದಕ್ಕಿದ್ದ ಪ್ರಾಮಾಣ್ಯವು ಆಗಮಕ್ಕು ಉಂಟೆಂಬುದು ತಿಳಿಯುತ್ತಿದೆ. ಸೂರ್ಯಭಟ್ಟನು—

" ನಹಿ ವೇದಾಗಮಯೋರತ್ಯಂತ ವಿರೋಧಃ | ಪರಕರ್ತೃಕತ್ವಾವಿಶೇಷಾತ್| " ಎಂದು ಹೇಳಿರುವನು. ಇದರಿಂದ ವೇದಾಗಮಗಳ ಕರ್ತ

ನಾದ ಪರಶಿವನೇ ಕರ್ತನೆ ಇದ್ದುದರಿಂದ ವೇದಾಗಮಗಳಿಗೆ ಅತ್ಯಂತ.
ವಿರೋಧವಿಲ್ಲವೆಂದು ತಿಳಿದುಬರುತ್ತದೆ ಇದರಿಂದ ಶಿವಾಗಮಗಳ ಪ್ರಾಮಾ
ಣಿಕತೆಯಲ್ಲಿ ವೈದಿಕತೆಯು, ಮತ್ತು ಸರ್ವಶಿಷ್ಟಮಾನ್ಯತೆಯು, ಎಷ್ಟಿದೆ
ಎಂಬುದು ಸ್ಪಷ್ಟವಾಗುತ್ತಿದೆ ಶ್ರೀಕಂಠ ಶಿವಾಚಾರ್ಯರು, ತಮ್ಮ ಶ್ರೀಕಂಠ
ಭಾಷ್ಯದಲ್ಲಿ— "ವಯಂತು ವೇದ ಶಿವಾಗಮಯೋರ್ಭೇದಂನಪಶ್ಯಾಮಃ "
[ ನಾವಾದರೋ ವೇದ ಮತ್ತು ಶಿವಾಗಮಗಳಿಗೆ ಭೇದವನ್ನೇ ಕಾಣೆವು ]
ಎಂದು ಸಾರಿರುವರು ಶಿವತತ್ತ್ವ ಗಂಭೀರರಾದ ಅಪ್ಪಯ್ಯ ದೀಕ್ಷಿತರು,
ತಮ್ಮ ಶಿವತತ್ತ್ವವಿವೇಕ ಗ್ರಂಥದಲ್ಲಿ—

"ವೇದಾರ್ಥ ಸಾರಸಂಗ್ರಹಾತ್ಮಕಾನಾಂ ಕ್ವಚಿದಪಿ ದೋಷಶಂಕಾಕ-
ಲುಷ ರಹಿತಾನಾಂ ಶೈವಾಗಮಾನಾಮೇವ ಸರ್ವಾಗಮೇಭ್ಯೋ ಬಲವತ್ತ್ವ
ವ್ಯವಸ್ಥಿತೇಃ" "ವೇದಾರ್ಥಸಾರದ ಸಂಗ್ರಹರೂಪ ಶಿವಾಗಮಗಳ ವಿಷ
ಯದಲ್ಲಿ ದೋಷವಾಗಲಿ, ಶಂಕೆಯಾಗಲಿ, ಕಲುಷವಾಗಲಿ ಕ್ವಚಿತ್ತಾದರೂ
ಇಲ್ಲವಾದುದರಿಂದ ಎಲ್ಲ ಆಗಮಗಳಿಗಿಂತ ಇವುಗಳಿಗೇನೆ ಮಹತ್ವದ ಪ್ರತಿ
ಷ್ಠೆಯುಂಟು" ಎಂದು ಉದ್ಘೋಷಿಸಿರುವರು ಇದರ ಮೇಲಿಂದ ಶಿವಾ
ಗಮಗಳ ಪ್ರತಿಷ್ಠಿತ ಪ್ರಾಮಾಣ್ಯವು ವೆಗ್ಗಳವಾಗಿದೆ

ವೇದಾಗಮ ಸಾರಸರ್ವಸ್ವವಾದ ವೀರಶೈವ ಮತಭಾಷ್ಯಕಾರಿಕೆಯು

ಆಗಮಾನಾಮಶೇಷಾಣಾ ಮುಪದೇಷ್ಟಾ ಮಹೇಶ್ವರಃ ||
ವೇದಾನಾಮಪಿ ನೈತೇಷುಯುಕ್ತಃ ಪ್ರಾಮಾಣ್ಯ ಸಂಶಯಃ ||
—ಕ್ರಿ ಸಾ. ಉ ಶ್ಲೋಕ ೧೩

ಎಲ್ಲ ಶಿವಾಗಮಗಳಿಗೂ, ವೇದಗಳಿಗೂ ಉಪದೇಶ ಕರ್ತನು ಮಹೇ
ಶ್ವರನೇ ಇರುವದರಿಂದ ಇವುಗಳಲ್ಲಿ ಪ್ರಾಮಾಣ್ಯದ ಬಗ್ಗೆ ಸಂಶಯ ಮಾಡು
ವುದು ಯುಕ್ತವಾಗಲಾರದು" ಎಂದು ಸಾರುತ್ತಿದೆ. ಆದುದರಿಂದ ಶ್ರೀ
ರೇಣುಕ ಭಗವತ್ಪಾದರು—

ಶೈವತಂತ್ರ ಮಿತಿಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಂ ||
ಸರ್ವವೇದಾರ್ಥ ರೂಪತ್ವಾತ್ ಪ್ರಾಮಾಣ್ಯಂ ವೇದವತ್‌ಸದಾ ||
—ಸಿ ಶಿ ಪ. ೫ ಶ್ಲೋ ೮

ಶೈವತಂತ್ರ (ಶಿವಾಗಮ) ವೆಂದು ಹೇಳಲ್ಪಟ್ಟ ಶಿವಸಿದ್ಧಾಂತವೆಂದು ಹೆಸರುಳ್ಳ ಶಿವಾಗಮವು ಎಲ್ಲ ವೇದಗಳ ಅರ್ಥರೂಪವಾದುದರಿಂದ ಯಾವಾಗಲೂ ವೇದದಂತೆಯೇ ಪ್ರಮಾಣಭೂತವಾದುದು" ಎಂದು ಆಜ್ಞೆಗೈದಿರುವರು

ಇಂತೀ ವಿವೇಚನೆಯಿಂದ ಶಿವಾಗಮಗಳ ಪ್ರಶಸ್ತಿಯು ಸ್ಪಷ್ಟವಾಗುವದಿಲ್ಲವೇ ?

## ಶಿವಾಗಮಗಳ ಕಾಲ

ಕಂಚಿಯ ಕೈಲಾಸನಾಥನ ಗುಡಿಯಲ್ಲಿ ಕ್ರಿ ಶತಕದ ೫ನೇ ಶತಮಾನದ ಒಂದು ಶಿಲಾಲೇಖವಿದೆ ಆದರಲ್ಲಿ ೨೮ ಶಿವಾಗಮಗಳ ಹೆಸರು ಬಂದಿದೆಯೆಂದು ಪ್ರೊ ರಾಧಾಕೃಷ್ಣನ್‌ರವರು ತಮ್ಮ "ಇಂಡಿಯನ್ ಪಿಲಾಸಫಿ" ಎಂಬ ಗ್ರಂಥದಲ್ಲಿ ಹೇಳಿದ್ದಾರೆ

ಇದರಿಂದ ಶಿವಾಗಮಗಳು ಕ್ರಿ ಶತಕದ ೫ನೆಯ ಶತಮಾನಕ್ಕೆ ಹಿಂದೆಯೇ ಇದ್ದುವೆಂದು ಸ್ಪಷ್ಟವಾಗುತ್ತಿದೆ,

## ಶಿವಾಗಮ ಕಾಲ ಪುರಾಣಗಳ ಕಾಲ ಪೂರ್ವ

ಶಿವಾಗಮಗಳ ಉಲ್ಲೇಖವು ವ್ಯಾಸಪುರಾಣಗಳಲ್ಲಿ ಬಹು ಕಡಗೆ ಕಾಣಬರುತ್ತಿದೆ ಹಿಂದೆ ಹೇಳಿದ ಸೂತಸಂಹಿತೆ, ವಾಯುಸಂಹಿತೆಗಳಲ್ಲಿ ಇದ್ದುದನ್ನು ಮರಳಿ ನೋಡುವಾ ಸೂತಸಂಹಿತೆಯ ಶಿವಮಾಹಾತ್ಮ್ಯ ಖಂಡದ ಅ. ೧ ಶ್ಲೋ ೧೯ ರಲ್ಲಿ- "ಕಾಮಿಕಾದಿ ಪ್ರಭೇದಾನಾಂ ಯಥಾ ದೇವೋ ಮಹೇಶ್ವರಃ" ಎಂಬುದಾಗಿ ಕಾಮಿಕಾದಿ ಶಿವಾಗಮಗಳ ಉಲ್ಲೇಖವು ದೊರೆಯುತ್ತಿದೆ ಮತ್ತು ವಾಯುವೀಯದ ಪೂರ್ವಭಾಗ ಅ ೩ ಶ್ಲೋಕ ೧೦ ಸೋಲಾಪುರ ಪ್ರತಿಯಲ್ಲಿ— "ಶೈವಾಗಮೈಸ್ತು ಸಪುನಸ್ಸಹಾಂಗೋಪಾಂಗ ವಿಸ್ತರಃ" ಎಂಬಂತೆ ಶೈವಾಗಮಗಳ ಉಲ್ಲೇಖವಿದೆ. ಶಿವಪುರಾಣದ ಉತ್ತರ ವಾಯವೀಯ ಅ ೧೬, ಶ್ಲೋ. ೭೭ ಮುಂಬಯಿ

ಪ್ರತಿಯಲ್ಲಿ– "ಶಿವಾಗಮಸ್ಯಗ್ರಹಣಂ" ಎಂಬುದಾಗಿ ಶಿವಾಗಮನಾಮವು ಉಲ್ಲೇಖಿತವಾಗಿದೆ † ಸ್ಕಂದಪುರಾಣ ಪ್ರಭಾಸ ಖಂಡದಲ್ಲಿ—

"ಅಷ್ಟಾವಿಂಶತ್ಯಾಗಮಾಶ್ಚ ವೇದಾಂಗಾನಿ ಮಹಾಮತೇ"

ಕಾಮಿಕ ಮೊದಲು ವಾತುಲ ಕೊನೆಯದಾಗಿ ಇರುವ ೨೮ ಶಿವಾಗಮಗಳು ವೇದಾಂಗಗಳೆಂದು ಪ್ರಸಿದ್ಧವು ಇಲ್ಲಿ ಆಗಮಗಳ ಸಂಖ್ಯಾಪೂರ್ವಕ ವಿವರಣೆಯಿದೆ ಸನತ್ಕುಮಾರ ಸಂಹಿತೆಯಲ್ಲಿ—

ಋಗಾದಿವೇದ ಸಾರಾಣಿ ಕಾಮಿಕಾದೀ ನಿಭೂನ್ಯರಾಃ ||
ನಿರ್ಮಿತಾನಿ ಮಯಾಪೂರ್ವಂ ವಿಪ್ರಾದೀನಾಂ ಹಿತಾಯಚ ||

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳ ಸಾರವಾದ ಕಾಮಿಕಾದಿ ಶಿವಾಗಮಗಳು ವಿಪ್ರಮೊದಲಾದ ಎಲ್ಲಮಾನವರ ಹಿತಕ್ಕಾಗಿ ನನ್ನಿಂದ ಪೂರ್ವದಲ್ಲಿ ನಿರ್ಮಿಸಲ್ಪಟ್ಟುವು. ಎಂಬುದಾಗಿ ಕಾಮಿಕಾದಿಗಳ ನಾಮನಿರ್ದೇಶವಿದೆ. ಸ್ಕಾಂದೇಹಿಮವತ್ಖಂಡೇ—

"ವೇದಾಗಮ ಸಮಾದಿಷ್ಟಮಾಚಾರಂ ಸಮ್ಯಗಾಚರೇತ್" ವೇದಾಗಮಗಳಿಂದ ಆಜ್ಞಾಪಿಸಲ್ಪಟ್ಟ ವೈದಿಕ ತಾಂತ್ರಿಕಾಚಾರವನ್ನು ಸಮೀಚೀನವಾಗಿ ಆಚರಿಸಬೇಕು. ಸ್ಕಂದಪುರಾಣದ ಧರ್ಮಸಂಹಿತೆಯಲ್ಲಿ—

ಶಿವಾಗಮೇತಿ ಹಾಸಾಭ್ಯಾಂ ವೇದಂ ಸಮುಪ ಬೃಂಹಯೇತ್ ||

"ಶಿವಾಗಮಗಳು ಮತ್ತು ಇತಿಹಾಸರೂಪ ಮಹಾಭಾರತವು ಇವುಗಳಿಂದ ವೇದಾರ್ಥವನ್ನು ನಿರ್ಣಯಗೊಳಿಸಬೇಕು ಇಲ್ಲವಾದರೆ ವೇದಾರ್ಥವು ಸರಿಯಾಗಿ ಆಗದು" ಎಂದು ಶಿವಾಗಮ, ನಾಮವು ಶಿಕ್ಕುತ್ತಿದೆ

ಶೈವಪುರಾಣೇ ಧರ್ಮಸಂಹಿತಾಯಾಂ —

ಯೇದ್ವಿಷಂತಿ ಶಿವಂ ದೇವಾನ್ ವೇದಾನ್ ಯಜ್ಞಾನ್ ಶಿವಾಗಮಾನ್ ||
ಅಧೋಮುಖೋರ್ಧ್ವಪಾದಾಶ್ಚ ಪಚ್ಯಂತೇ ನರಕಾದಿಷು ||

"ಶಿವನನ್ನೂ ಶಿವಭಕ್ತರಾದ ದೇವತೆಗಳನ್ನೂ ವೇದಗಳನ್ನೂ ಶಿವಾರ್ಚಾದಿಕ ಯಜ್ಞಗಳನ್ನೂ ಶಿವಾಗಮಗಳನ್ನೂ ಯಾರು ದ್ವೇಷಿಸುತ್ತಾರೋ ಅವರು

---

† ವೀರಶೈವ ಮತಪ್ರಾಚೀನತ್ವ ಪು ೨೭ ರಿಂದ

ನರಕಾದಿಗಳಲ್ಲಿ ತಲೆ ಕೆಳಗಾಗಿ ಕಾಲುಮೇಲಾಗಿ ಕುದಿಸಲ್ಪಡುತ್ತಾರೆ" ಎಂದು ಹೇಳಿದೆ ಇಲ್ಲಿ "ಶಿವಾಗಮಾನ್" ಎಂದು ಉಲ್ಲಿಖಿತವಾಗಿದೆ ಶಂಕರ ಸಂಹಿತಾಯಾಂ—

"ವೇದಾನ್ ಸ್ಮೃತಿ ಪುರಾಣಾನಿ ತ್ವಾಗಮಾನಪಿ ಶಾಂಕರಾನ್ ||
ಯೋವಿನಿಂದತಿ ಮೂಢಾಥ್ಮಾಸೋಽಂಧ ತಮಸಿಮಜ್ಜತಿ ||

" ಯಾವನು ವೇದಗಳನ್ನೂ ಸ್ಮೃತಿಪುರಾಣಗಳನ್ನೂ ಶಂಕರನ ಸಂಬಂಧವಾದ ಆಗಮಗಳೆಂದರೆ ಶಿವಾಗಮಗಳು ಇವುಗಳನ್ನೂ ಮೂಢಾತ್ಮನಾಗಿ ನಿಂದಿಸುವನೋ ಅವನು ಅಂಧ ತಮಸ್ಸೆಂಬ ನರಕದಲ್ಲಿ ಮುಳುಗುತ್ತಾನೆ " ಇಲ್ಲಿ "ಶಾಂಕರಾನಾಗಮಾನ್" ಎಂದು ಶಿವಾಗಮಗಳಿಗೆ ಹೇಳಿದೆ

ಹೀಗೆ ಹಲವೆಡೆಯಲ್ಲಿ ವ್ಯಾಸಪುರಾಣಗಳಲ್ಲಿ "ಶಿವಾಗಮದ" ಉಲ್ಲೇಖವು ದೊರೆಯುವುದರಿಂದ ಪುರಾಣಗಳಿಗಿಂತ ಶಿವಾಗಮಗಳು ಹಿಂದೆಯು ಇರಬೇಕಾಗಿ ಶಿವಾಗಮ ಕಾಲವು ಪುರಾಣ ಕಾಲಕ್ಕಿಂತ ಪೂರ್ವವೆಂದು ಸಿದ್ಧವಾಗುತ್ತಿದೆ

## ಶಿವಾಗಮಕಾಲ ಮಹಾಭಾರತಕಾಲ ಪೂರ್ವ

" ಭಾರತಾಚಾರ್ಯ ಚಿಂತಾಮಣಿ ವಿನಾಯಕ ವೈದ್ಯ " ರವರು ಮಹಾಭಾರತದ ಉಪಸಂಹಾರ " ಎಂಬ ಗ್ರಂಥದಲ್ಲಿ—

"ಕ್ರಿ ಪೂ ೩೧೦೪ರಲ್ಲಿ ಶ್ರೀವ್ಯಾಸರು "ಜಯ"ವೆಂಬ ಗ್ರಂಥವನ್ನು ಒರೆದರು ಮುಂದೆ ವೈಶಂಪಾಯನರು, ಕೆಲ ಶ್ಲೋಕಗಳನ್ನು ಕೂಡಿಸಿ, ಅದಕ್ಕೆ "ಭಾರತ'ವೆಂದು ಕರೆದರು ಆಬಳಿಕ "ಸೌತಿ"ಎಂಬವನು ೭೬೦೦೦ ಶ್ಲೋಕಗಳನ್ನು ಅದಕ್ಕೆ ಕೂಡಿಸಿ, "ಮಹಾಭಾರತವೆಂದು ಕರೆದನು " ಎಂಬುದಾಗಿ ಹೇಳಿದ್ದಾರೆ "ಸೌತಿ"ಯ ಕಾಲವು ಕ್ರಿ ಪೂ ೩ನೆಯ ಶತಮಾನವೆಂದು ಮೇಲ್ಕಂಡ ವೈದ್ಯರ ಮತವು

ಹೀಗೆ ಕ್ರಿ ಪೂ ೩ನೆಯ ಶತಮಾನದಲ್ಲಿ ಮಹಾಭಾರತವು ರಚಿಸಲ್ಪಟ್ಟಿತೆಂಬುದು ನವಸುಧಾರಕರ ಮತವು

ಇಂತಹ ಮಹಾಭಾರತದ ಅನುಶಾಸನ ಪರ್ವದ ೨೪೬ನೆಯ ಅಧ್ಯಾಯದಲ್ಲಿ-- "ಅಹಂಪಶುಪತಿರ್ನಾಮ" "ಪವಿತ್ರಾರ್ಥಂಚಭಾಮಿನಿ" "ಪರಿತುಷ್ಯಾಮ್ಯಹಂ ಪ್ರಿಯೇ" ಕ್ರಮವಾಗಿ ೧೩-೧೪-೨೬ನೆಯ ಶ್ಲೋಕಗಳಲ್ಲಿದ್ದ ಮೇಲ್ಕಂಡ ವಾಕ್ಯಗಳಾದರೋ ಇದ್ದಕ್ಕಿದ್ದ ಹಾಗೆ ಶೈವಾಗಮಗಳೊಳಗಣವೇ ಇವೆ ಈ ರೀತಿಯಾಗಿ ಸದ್ಧರ್ಮವನ್ನು ಪ್ರತಿಪಾದಿಸತಕ್ಕ ಬಹು ಸ್ಥಳಗಳಲ್ಲಿ ಶೈವಾಗಮಗಳ ವಾಕ್ಯಗಳೇ ಇದ್ದಕ್ಕಿದ್ದ ಹಾಗೆ ಅನುವಾದಾತ್ಮಕವಾಗಿ ಸೇರಿಸಲ್ಪಟ್ಟಿವೆ ಎಂಬು ಆಗಮ ಪರಿಜ್ಞಾನಕಾರರು ತಮ್ಮ ಆಗಮಪರಿಜ್ಞಾನದಲ್ಲಿ ಸಿದ್ಧಗೊಳಿಸಿದ್ದಾರೆ ಅದುಧರಿಂದಲೇ ಮಹಾಭಾರತದ ಅನುಶಾಸನ ಪರ್ವದಲ್ಲಿ ೧೪ ಮತ್ತು ೨೦ನೆಯ ಅಧ್ಯಾಯಗಳಲ್ಲಿಯು—

ಯಾನೀಹಾಗಮಶಾಸ್ತ್ರಾಣಿ ಯಾಶ್ಚ ಕಾಶ್ಚಿತ್ ಪ್ರವೃತ್ತಯಃ ||
ತಾನಿವೇದಂ ಪುರಸ್ಕೃತ್ಯಪ್ರವೃತ್ತಾನಿ ಯಥಾಕ್ರಮಂ ||
ತತ್ರಗತ್ವಾ ವಿಧಿಂಜ್ಞಾತ್ವಾದೀಕ್ಷಾಂ ಕುರ್ಯಾದ್ಯಥಾಗಮಂ ||

ಎಂಬೀ ಶ್ಲೋಕಗಳು ವೇದ ವಿರುದ್ಧವಾದ ಶಿವಾಗಮಗಳ ಪ್ರಾಮಾಣ್ಯವನ್ನು ತೋರಿಸುವವಲ್ಲದೆ ಇದಕ್ಕಿಂತ ಪೂರ್ವದಲ್ಲಿ ಅವುಗಳ ಉತ್ಪತ್ತಿಯನ್ನು ವ್ಯಕ್ತಗೊಳಿಸುವವೆಂದೇ ಸಿದ್ಧವಾಗುತ್ತಿದೆ

ಇದರ ಮೇಲಿಂದ ಶಿವಾಗಮಗಳು ಮಹಾಭಾರತಕಾಲಕ್ಕೆ ಅಂದರೆ-ಕ್ರಿ ಪೂ ೩ನೆಯ ಶತಮಾನಕ್ಕೆ ಮುಂಚೆಯೆ ಇದ್ದುವೆಂಬುದು ಸಿದ್ಧವಾಗುತ್ತಿದೆ

## ಶಿವಾಗಮಕಾಲ ಸ್ಮೃತಿಕಾಲಕ್ಕಿಂತ ಪೂರ್ವ

(ಕ್ರಿ ಶ ೧೧೬೦)ರಲ್ಲಿದ್ದ ಶ್ರೀಪತಿಪಂಡಿತಾರಾಧ್ಯರು ತಮ್ಮ ಶ್ರೀಕರ ಭಾಷ್ಯದಲ್ಲಿ—

"ಸ್ವಯಂ ವೇದಾಂತ ವಿಜ್ಞಾನೇ ಪ್ರಾಕ್ತ್ಯಾಯೋ ಮಹಾನ್ಭವೇತ್||
ಸ್ಮೃತಿತಂತ್ರ ಪುರಾಣೇಭ್ಯೋವೇದಾರ್ಥಂ ಗ್ರಾಹಯೇದ್ಬುಧಃ "
ಇತಿ ಸ್ಮೃತೌವೇದಾರ್ಥವಿಜ್ಞಾನೇ ನಿಯಮವಿಧಿ ದರ್ಶನಾದಪಿಚ ||

" ವೇದಾಂತ ವಿಜ್ಞಾನವು ಸ್ವಯಂ ಮಾಡಲ್ಪಟ್ಟರೆ ಪ್ರತ್ಯವಾಯವುಂಟಾಗು ವದು ಆದುದರಿಂದ ಪಂಡಿತನು ಸ್ಮೃತಿ ಮತ್ತು ತಂತ್ರ ಪುರಾಣಗಳಿಂದ ವೇದಾರ್ಥವನ್ನು ಗ್ರಹಿಸಬೇಕು ಎಂದು ಒಂದು ಪಂಕ್ತಿಯಿಂದ ಸ್ಮೃತಿಯು ಲ್ಲಿಯೇ "ಶಿವಾಗಮ" ರೂಪತಂತ್ರದ ಉಲ್ಲೇಖವಿರುವುದರಿಂದ ಸ್ಮೃತಿಗಳ ಗಿಂತಲೂ ಶಿವಾಗಮರೂಪ ತಂತ್ರಗಳ ಪ್ರಾಚೀನತೆಯು ತಿಳಿಯಬಹು. ದಾಗಿದೆ

ಸ್ಮೃತಿಗಳಿಗೆ ಧರ್ಮಶಾಸ್ತ್ರವೆಂಬುದು ರೂಢವಾಗಿದೆ ಆದರೆ "ಆದ್ಯ ಧರ್ಮಶಾಸ್ತ್ರ"ಗಳೆಂದರೆ ಶಿವಾಗಮಗಳು ಸ್ಮೃತಿಗಳು ಮಾತ್ರ ಅ ವರಧರ್ಮ ಶಾಸ್ತ್ರಗಳೆಂದು "ಶ್ರೀನಂದಿಕೇಶ್ವರ"ರು ತಮ್ಮ "ಶಿವಧರ್ಮ ಸಂಹಿತೆ"ಯಲ್ಲಿ ಸಿದ್ಧಾಂತಗೊಳಿಸಿರುವರು ಈ ಬಗ್ಗೆ "ವೇದಪರಿಚಯ" ಗ್ರಂಥದ ೧೬೩ ನೆಯ ಪುಟ ನೋಡಬೇಕು.

ಇದರಿಂದಲೂ ಶಿವಾಗಮಕಾಲವು, ಸ್ಮೃತಿಕಾಲಕ್ಕೆ ಪ್ರಾಚೀನವಾದು ದೆಂದು ಸ್ಪಷ್ಟವಾಗುತ್ತಿದೆ

ಇನ್ನು "ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್" ಎಂಬ ಕಾಳಿದಾ ಸೋಕ್ತಿಯಂತೆ ಸ್ಮೃತಿಗಳು ಯಾವಾಗಲೂ ಶ್ರುತಿಯನ್ನು ಹಿಂಬಾಲಿಸು ವದು ಸರಿಯಷ್ಟೇ! ಆದರೆ ಹಾರೀತಮುನಿವರರು "ಅಥಾತೋಧರ್ಮಂ ವ್ಯಾಖ್ಯಾಸ್ಯಾಮಃ ಶ್ರುತಿಪ್ರಮಾಣಕೋ ಧರ್ಮಃ" "ಶ್ರುತಿಶ್ಚ ದ್ವಿವಿಧಾ ವೈದಿಕೀ ತಾಂತ್ರಿಕೀಚ" ಧರ್ಮಕ್ಕೆ ಶ್ರುತಿಯೇ ಮೂಲಪ್ರಮಾಣವು, ಆ ಶ್ರುತಿಯಾದರೋ ವೈದಿಕೀ ಶ್ರುತಿಯೆಂದೂ, ತಾಂತ್ರಿಕೀ ಶ್ರುತಿಯೆಂದೂ ಎರಡು ತೆರನಾಗಿದೆ ಎಂದು ಸೂತ್ರಿಸಿರುವರು.

ಇದರಿಂದ ಸ್ಮೃತಿಗಳಿಗೆ ವೇದ ಮತ್ತು ಆಗಮರೂಪ ಶ್ರುತಿಯೇ ಮೂಲವೆಂಬುವ ಮಾತು ಸ್ಪಷ್ಟವಾಗುತ್ತಿದ ಮತ್ತು ವೇದಾಗಮಗಳೆ ರಡೂ ಶ್ರುತಿ ಎಂಬ ಶಬ್ದದಲ್ಲಿ ಅಂತರ್ಭಾವ ಹೊಂದುವದರಿಂದ ದ್ವಿದಳ ಧಾನ್ಯದಂತೆ ನಾಣ್ಯದ ಎರಡು ಮಗ್ಗಲುಗಳಂತೆ ಅವಿಭಾವಗೊಳ್ಳುವಾಗ ಒಂದೇ ಒಂದಾದ ಶ್ರುತಿರೂಪವೆಂಬ ಮಾತಿಲ್ಲಿ ತಿಳಿಯುತ್ತಿದೆ ಸಂಸ್ಕೃತ

ಗ್ರಂಥಗಳಲ್ಲಿ ಶೃತಿ ಪ್ರಮಾಣವನ್ನು ಕೊಡುವಾಗ 'ಶ್ರೂಯತೇ' ಎಂದೂ, ಸ್ಮೃತಿ ಪ್ರಮಾಣವನ್ನು ಕೊಡುವಾಗ್ಗೆ 'ಸ್ಮರ್ಯತೇ' ಎಂದೂ ಹೇಳುವದು ಸರ್ವಸಾಮಾನ್ಯವಾಗಿದೆ ಇದೇ ಬಗೆಯಿಂದ 'ಶಿವಾಗಮ' ಪ್ರಮಾಣ ವನ್ನು ಕೊಡುವಾಗ 'ಶ್ರೂಯತೇ' ಎಂದೂ ಹೇಳುವದು ಸಾರ್ವತ್ರಿಕ ರೂಡಿಯಾಗಿದೆ ಇದನ್ನು ವೀರಶೈವ ಭಾಷ್ಯಾದಿಗಳಲ್ಲಿ ಕಾಣಬಹುದಾ ಗಿದೆ ಉದಾಹರಣೆ– ಶ್ರೀಕರಭಾಷ್ಯದ ೯ನೆಯ ಪುಟಗಳಲ್ಲಿ "ಶೃತಿಷು ಪರಮೇಶ್ವರಧ್ಯಾನ ಧಾರಣಮೇವ ಮುಮುಕ್ಷೂಣಾಂ ವಿಧೇಯಮಿತಿ ಶ್ರೂಯತೇ" ಎಂದು ಹೇಳುವಂತೆ, ಇದೇ ಭಾಷ್ಯದ ಇದೇ ಪುಟದಲ್ಲಿ "ಏತದೇವ ವಾತುಲಾಗಮೇ ಶ್ರೂಯತೇ" ಎಂಬದು ಸ್ಪಷ್ಟವಾಗಿದೆ. ಇದೇ ಭಾಷ್ಯದ ೪೩೧ನೆಯ ಪುಟದಲ್ಲಿ "ಶಿವಾಗಮೇಶ್ರೂಯತೇ" ಎಂದೂ ೪೦೦ನೆಯ ಪುಟದಲ್ಲಿ "ಇತೀ ಸಿದ್ಧಾಂತಾಗಮೇ ಶ್ರೂಯತೇ" ಎಂದೂ ನಿರೂಪಿತವಾಗಿದೆ ಇದೇ ಬಗೆಯಾಗಿ "ಕ್ರಿಯಾಸಾರ"ದ ೫೯ನೆಯ ಉಪದೇಶದ ೬ನೆಯ ಶ್ಲೋಕದಲ್ಲಿ ಆಗಮ ಪ್ರಾಮಾಣ್ಯ ಪ್ರಸ್ತಾವದಲ್ಲಿ— "ಶ್ರೂಯಂತೇ ತತ್ರತತ್ರತು" ಎಂದೂ ನಿರೂಪಿತವಾಗಿದೆ ಇದೇ ರೀತಿ ಯಿಂದ ಎಲ್ಲ ಸಂಸ್ಕೃತ ಗ್ರಂಥದ ಪದ್ಧತಿಯನ್ನು ಕಾಣದಹುದಾಗಿದೆ

ಇದರಿಂದ "ಶ್ರೂಯತ ಇತಿ ಶೃತಿಃ" ಎಂಬಂತೆ ನಿಗಮಾಗಮಗಳಿಗೆ ವೈದಿಕೀಶೃತಿ, ತಾಂತ್ರಿಕೀಶೃತಿ ಎಂಬುದು ಎಲ್ಲ ವೀರಶೈವ ಸಂಸ್ಕೃತ ಗ್ರಂಥಕಾರರಿಗೂ, ಹೃತ್ಪೂರ್ವಕವಾಗಿ ಅಭಿಮತವಾದ ಮಾತಾಗಿದೆ ಎಂಬಲ್ಲಿ ಸಂಶಯವಾರಿಗೂ ಬಾರದು

ಆದುದರಿಂದಲೇ ಕನ್ನಡ ವಚನಕಾರರು ತಮ್ಮ ತಮ್ಮ ವಚನಗಳಲ್ಲಿ ಆಗಮ ಪ್ರಮಾಣವನ್ನು ನಿರೂಪಿಸುವಾಗ "ಇಂತೆಂದುದು ಶೃತಿ" "ಇಂತೆಂ -ದುದು ಶೃತಿ" ಎಂದು ಬಾರಿಬಾರಿಗೂ ನಿರೂಪಿಸುವ ರೂಢಿಯುಂಟು. ವಚನಶಾಸ್ತ್ರದ ೧ನೇ ಭಾಗ ಪುಟ ೭೪೮ರಲ್ಲಿ– "ಇಂತೀಶ್ರುತ್ಯರ್ಥವನರಿಯದೆ ಎಂದು ಆಗಮ ಪ್ರಮಾಣದ ಪ್ರಸ್ತಾವದಲ್ಲಿ ನಿರೂಪಿಸಿದುದು ಸಂಗತ ವಾಗಿದೆ "ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ,

ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದಡೆ, ಎನ್ನ ಮನಕ್ಕೆ ಮನಸೇಸಾಕ್ಷಿ" "ಭವಿನಾಶಯನೇ ಯಾನೆ ಸಂಪರ್ಕೇ ಸಹಭೋಜನೆ | ಸಂಚರಂತಿಮುಹಾ ಘೋರೇ ನರಕೇ ಕಾಲಮಕ್ಷಯಂ" ಎಂಬ ಶೃತಿಯ ಬಸವಣ್ಣ ನೋಡುವನು ಕೂ ನಂ ದೇವ" ಎಂಬೀ ಬಸವ ಮಹಾನುಭಾವನ ವಚನ ದಲ್ಲಿ ಆಗಮಕ್ಕೆ 'ಶೃತಿ' ಎಂಬುದು ಬಹು ಸ್ಫುಟವಿದೆ ಇದೇ ಗ್ರಂಥದ ದಲ್ಲಿ ಉದಾಹರಿಸಿದ ಶ್ರೀ ಚನ್ನಬಸವಣ್ಣನವರ ವಚನದಲ್ಲಿ ವೀರಾಗಮಪ್ರಮಾಣಕ್ಕೆ "ಇಂತೀ ಶೃತ್ಯರ್ಥವನರಿಯದೆ" ಎಂಬುದಾಗಿ ಆಗಮಕ್ಕೆ ಶೃತಿ ಎಂದು ಕರೆವುದು ಪ್ರಸಿದ್ಧವಿದೆ ಈ ನೇರಿಗೆ ಆಗಮಕ್ಕೆ ಶೃತಿ ಎಂದು ಕರೆವುದು ಸಾರ್ವತ್ರಿಕ ರೂಢಿಯೆಂಬು ಅದುಕಾರಣ ವೈದಿಕೀ ತಾಂತ್ರಿಕೀ ಶೃತಿಯು ಸ್ಮೃತಿಗಳಿಗೆ ಮೂಲಾಧಾರವಾಗಿದೆ

ಇಂತೀ ವಿವೇಚನೆಯಿಂದ ಶಿವಾಗಮ ಕಾಲವು ಸ್ಮೃತಿಕಾಲಕ್ಕೆ ಪೂರ್ವವೆಂಬುದು ಬಹು ಸ್ಪಷ್ಟವಾಗುತ್ತಿದೆ

## ಶಿವಾಗಮಕಾಲ ಉಪನಿಷತ್ಕಾಲಕ್ಕಿಂತ ಮುಂಚೆ

ಸಂಸ್ಕೃತ ವ್ಯಾಕರಣಕರ್ತನಾದ ಪಾಣಿನ್ಯಾಚಾರ್ಯನು ಬುದ್ಧ ಪೂರ್ವನೆಂಬುದು ನಿರ್ವಿವಾದವಷ್ಟೇ! ಈತನ ಸಮಕಾಲೀನನಾದ ನಂದಿ ಕೇಶ್ವರನು ತನ್ನಿಂದ ರಚಿಸಲ್ಪಟ್ಟ "ನಂದಿಕೇಶ್ವರಕಾಂಕ" ಎಂಬುದಕ್ಕೆ ಉಪಮನ್ಯು ಮುನಿಯು "ಶಿವಸೂತ್ರ ವಿಮರ್ಶಿನಿ" ಎಂಬ ವ್ಯಾಖ್ಯಾನ ವನ್ನು ಬರೆದಿರುವನು ಈ ವ್ಯಾಖ್ಯಾನದ ಕೊನೆಯಲ್ಲಿ—

"ಹಕಾರಃ ಶಿವವರ್ಣಸ್ಯಾದಿತಿ "ಶೈವಾಗಮ, ಸ್ಥಿತಿಃ" ಎಂಬಲ್ಲಿ ಶೈವಾಗಮ" ನಾಮೋಲ್ಲೇಖನಗೊಳಿಸಿರುವುದರಿಂದ ಶಿವಾಗಮಗಳು ಇವರ ಕಾಲಕ್ಕಿಂತ ಪೂರ್ವದಲ್ಲಿದ್ದುವೆಂಬುದು ಸ್ಫುಟವಾಗುತ್ತಿದೆ ಯಾಕಂದರೆ "ಉಪನಿಷತ್ಕಾಲ" ದ ಮಾಲಾಗಿದೆ "ಕರ್ನಾಟಕ ಧರ್ಮಗಳು" ಎಂಬ ಗ್ರಂಥದಲ್ಲಿ— "ಉಪನಿಷತ್ತುಗಳಕಾಲ ಬೌದ್ಧಯುಗಕ್ಕಿಂತ ಅಂದರೆ ಕ್ರಿ ಪೂ ೬ನೆಯ ಶತಕಕ್ಕಿಂತಮೊದಲನೆಯದು, ಎಂದು ಹೇಳಲ್ಪಟ್ಟಿದೆ. ಅಥವಾ "ಲಿಂಗೋಪನಿಷತ್ತು" "ಶ್ರೌತಾಶ್ರೌತ, ವಿಚಾರವನ್ನು ಹೇಳುತ್ತಿದೆ.

ಈ ಒಳಭೇದವಾದರೋ— ಶ್ರೀಕರಭಾಷ್ಯದ (೪೩೧) ನೆಯ ಪುಟ-ದಲ್ಲಿ ಉದಾಹೃತ ಶಿವಾಗಮದಲ್ಲಿ—"ಶ್ರೌತಾಶ್ರೌತ ವಿಭೇದೇನ ತದ್ದ್ವಿಧಾ ಪರಿಚಕ್ಷತೇ" ಎಂಬುದಾಗಿ ಕಾಣಬರುತ್ತಿದೆ ಇದೇ ಒಗೆಯಾಗಿ ಇತರ ಶಿವಾಗಮಗಳಲ್ಲಿಯೂ ಉಕ್ತವಾಗಿರಲು, ವೀರಶೈವಕ್ಕೆ ಶಿವಾಗಮಗಳೇ ಉಗಮಸ್ಥಾನವೆಂಬುದು ಹೊಸಮಾತಲ್ಲ ಇಂತು ಸಾಂಗೋಪಾಂಗವಾಗಿ ಶೈವಾಗಮ ಮಾತ್ರ ಪ್ರತಿಪಾದಿತವಾದ ಶ್ರೌತಾಶ್ರೌತ ವೀರಶೈವವು ಮೇಲ್ಕಂಡ ಉಪನಿಷತ್ಪ್ರತಿಪಾದ್ಯವಾಗಿ ಕಥಂಚಿ ದುದಾಹೃತವಾಗಿರುವುದ-ರಿಂದ ಅಂತಹ "ಶೈವಾಗಮ"ಗಳು ಉಪನಿಷತ್ಪೂರ್ವಗಳೆನಬೇಕಾಗುವುದು ಸಿದ್ಧಾಂತವು ಈಗ ೨೦೦ಕ್ಕೆ ಮೇಲ್ಪಟ್ಟು ಉಪಲಬ್ಧವಿರುವ ಉಪನಿಷತ್ತುಗಳಲ್ಲಿ, "ಸಿದ್ಧಾಂತ ಶಿಖೋಪನಿಷತ್" ಎಂಬುದು, ಪ್ರಸಿದ್ಧವಷ್ಟೇ! ಅದರಲ್ಲಿ "ಯೋಽ ಯಂನಕಾರಃ" ಎಂಬ ೬ನೆಯ ಮಂತ್ರದಲ್ಲಿ—

ಋಗ್ವೇದಸ್ಸ ಸಂಪುಟ ಉಚ್ಯತೇ | ಯಜುರ್ವೇದೋವಸ್ತ್ರ ಮುಚ್ಯತೇ|
ಸಾಮವೇದೋಗುಣ ಉಚ್ಯತೇ | ಅಥರ್ವಣ ವೇದೋದ್ವಾರಮುಚ್ಯತೇ|
ಆಗಮೋಲಿಂಗ ಮುಚ್ಯತೇ ||

ಎಂಬುದಾಗಿ ಋಗಾದಿ ವೇದಗಳನ್ನು ಕರಡಿಗೆ ಹುದುಗೆವರಿವೆ ಶಿವ-ದಾರ ಲಿಂಗಪ್ರವೇಶಾರ್ಹದ್ವಾರಗಳನ್ನಾಗಿ ಹೇಳಿ, ಅಂತಹ ಕರಡಿಗಯಲ್ಲಿಡ ಬಹುದಾದ ಲಿಂಗವಾವುದೆಂದರೆ— "ಆಗಮೋಲಿಂಗ ಮುಚ್ಯತೇ" ಎಂದು ಶಿವಾಗಮಕ್ಕೆ ರೂಪಕಾಲಂಕಾರದಿಂದ ಲಿಂಗವೆಂದು ಸಾರಿದೆ ಇದರಿಂದ ಉಪನಿಷತ್ತುಗಳಲ್ಲಿ "ಶಿವಾಗಮ" ನಾಮೋಲ್ಲೇಖನವು ದೊರೆವುದರಿಂದ ಉಪನಿಷತ್ಕಾಲ ಪೂರ್ವದಲ್ಲಿ ಶಿವಾಗಮಗಳಿದ್ದುದು ಸಹಜವಾಗುವದಷ್ಟೇ! ಮತ್ತು "ವೀರಲಿಂಗೋಪನಿಷತ್ತಿನಲ್ಲಿ" "ಸಮುಕ್ತೋಭವತಿ ವೇದಾಗಮ-ಜ್ಞೋಭವತಿ" ಎಂದು ವೇದಆಗಮಗಳ ಉಲ್ಲೇಖನವು ದೊರೆಯುತ್ತಿದೆ ಅಲ್ಲದೆ ಅವುಗಳ ಸಾಹಚರ್ಯ ಸಂಬಂಧವೂ ತಿಳಿದುಬರುತ್ತಿದೆ

"ಷಟಸ್ಥಲ ಬ್ರಹ್ಮದೀಪಿಕಾಕಾರನು ತನ್ನ "ಷಟ್‌ಸ್ಥಲ ಬ್ರಹ್ಮದೀ-ಪಿಕೆ"ಯಲ್ಲಿ—"ಅವಿದ್ಯಾದಿಪಂಚಕ್ಲೇಶಾನಾಕುಲಃ ಸರ್ವಾಗಮ ಪ್ರಣೇತಾ"

ಎಂಬೀ ಉಪನಿಷದ್ವಚನಗಳಿಂದ ಶಿವಾಗಮ ಸದ್ಭಾವವನ್ನು ಉಪನಿಷತ್ಪೂರ್ವವಾಗಿ ಸಿದ್ಧಾಂತಗೊಳಿಸಿರುವದರಿಂದ, "ಶಿವಾಗಮ"ಗಳ ಕಾಲವು ಉಪನಿಷತ್ಕಾಲಕ್ಕಿಂತ ಮುಂಚಿನದೆಂದು ಸಿದ್ಧವಾಗುತ್ತಿದೆ

## ವೇದಕಾಲವಾವುದೋ ಅದೇ ಶಿವಾಗಮಕಾಲ

ಶ್ರೀಯುತ ವೀರಪ್ಪ ಬಸವಪ್ಪ ಬಿಳಿಲಿಂಗಡ, ಬಿ ಎ , ಎಲೆಲ್ ಬಿ , ವಕೀಲ ಹುಬ್ಬಳ್ಳಿ,ಇವರು ತಮ್ಮ "ವೀರಶೈವಮತಪ್ರಾಚೀನತ್ವ, ಗ್ರಂಥದ ಪ್ರಸ್ತಾವನೆಯ ಕೊನೆಯಲ್ಲಿ ಹೀಗೆ ಹೇಳಿದ್ದಾರೆ —

" ವೀರಶೈವ ಮತಕ್ಕೆ ವೇದಗಳೂ ಉಪನಿಷತ್ತುಗಳೂ ಶೈವಾಗಮಗಳೂ ದಶಪುರಾಣಗಳೂ ಮೊದಲಾದ ಶಾಸ್ತ್ರಗಳು ಪ್ರಮಾಣ ಗ್ರಂಥಗಳಾಗಿವೆ ವೇದೋಪನಿಷತ್ತುಗಳಲ್ಲಿ ಈ ಮತವು ಸಂಕ್ಷೇಪವಾಗಿ ಹೇಳಲ್ಪಟ್ಟಿದ್ದು ಹಚ್ಚುವಿಸ್ತಾರವಾಗಿ ಇಪ್ಪತ್ತೆಂಟು ಶಿವಾಗಮಗಳಲ್ಲಿ ವರ್ಣಿಸಲ್ಪಟ್ಟಿದೆ ನಿಗಮಾಗಮಗಳ ಕರ್ತೃವು ಅನಾದಿಪರಶಿವನೇ ಆಗಿರುತ್ತಾನ ವೇದಾರ್ಥವನ್ನು ಪ್ರತಿಪಾದಿಸತಕ್ಕವು ಶೈವಾಗಮಗಳು ಏಕಾರ್ಥಪ್ರತಿಪಾದಕತ್ವ-ದಿಂದ ಇವುಗಳಲ್ಲಿ ಪರಸ್ಪರ ವಿರೋಧವಿಲ್ಲ "ಈ ಶೈವಾಗಮಗಳು ಅತ್ಯಂತ ಪ್ರಾಚೀನ ಗ್ರಂಥಗಳೆಂದು " ಇತ್ತಲಾಗಿ ನಮ್ಮ ವೀರಶೈವ ಸಮಾಜದಲ್ಲಿ ಪಂಡಿತ ಶಿರೋಮಣಿಗಳೆನಿಸಿದ ಶ್ರೀಯುತ ಸಿದ್ಧರಾಮಪ್ಪನವರು ಪಾವಟೆ, ಇವರು ತಮ್ಮ ಅವಿಶ್ರಾಂತ ಅಭ್ಯಾಸದಲ್ಲಿಯ ಶೋಧದಿಂದ ಕಂಡುಹಿಡಿದಿ-ರುತ್ತಾರೆ. ಈ ಶೈವಾಗಮಗಳು ಉಪನಿಷತ್ತುಗಳ ಅರ್ಥವನ್ನು ಸ್ಪಷ್ಟೀ-ಕರಿಸುವವಲ್ಲದೆ, ಅವುಗಳಲ್ಲಿ ಕೆಲವಕ್ಕೆ ಮೂಲಾಧಾರಗಳಾಗಿವೆ ಎಂದು ಮೇಲ್ಕಂಡ ಪಂಡಿತರು ಗೊತ್ತುಹಚ್ಚಿರುತ್ತಾರೆ ಇದಕ್ಕೂ ಹೆಚ್ಚಿನ ಸಂಗತಿ ಏನಂದರೆ–ಭೂಮಂಡಲದಲ್ಲಿರುವ ಸರ್ವಜನಾಂಗದವರಿಗೂ ಒಪ್ಪಿಗೆಯುಳ್ಳ ಮಹತ್ತರವಾದ ತತ್ವಗಳನ್ನೊಳಕೊಂಡ "ಭಗವದ್ಗೀತೆ"ಯು ಶೈವಾಗಮ-ಗಳಿಂದ ಹುಟ್ಟಿರುವುದಾಗಿ ಅದೇ ಪಂಡಿತಾಗ್ರಗಣ್ಯರು ಲೇಖನದಿಂದ ಪ್ರಸಿದ್ಧಗೊಳಿಸಿರುವರು ಮತ್ತು ಈ ಬಗ್ಗೆ ಅನೇಕ ಲೇಖನಗಳನ್ನು ಬರೆಯತಕ್ಕವರಿದ್ದಾರೆ ಅಂದಮೇಲೆ ಶೈವಾಗಮಗಳೇ ಮೂಲಸ್ತಂಭಗಳಾದ

ವೀರಶೈವಮತದ ಪ್ರಾಚೀನತ್ವವೂ ಅದರ ಮಹತ್ತರವಾದ ಗೌರವವೂ ಸ್ವಯಂಸಿದ್ಧವಾದಂತಾಗುವುದು."

ಇದರ ಮೇಲಿಂದ ಶಿವಾಗಮಗಳ ಗೌರವವು ಎಷ್ಟಿದೆಯೆಂಬುದು ತಿಳಿಯುತ್ತಿದೆ ಮತ್ತು "ಭಗವದ್ಗೀತೆ" ಗೆ ಶಿವಾಗಮಗಳು-ಆಧಾರವಾಗ ಬೇಕಾದರೆ ಕ್ರಿ ಪೂ ೩೧೦೮ ನೆಯ ವರ್ಷದಲ್ಲಿ ಉಪಸ್ಥಿತನಾದ ವ್ಯಾಸ ಮುನಿಯ ಕಾಲಕ್ಕಿಂತ ಶಿವಾಗಮಗಳು ಪೂರ್ವದವಿರಬೇಕಾಗುವದು ಸಹಜ ವಾಗಿಧೆ ಅದುಕಾರಣ ಆಗಮತತ್ವ ವಿಶಾರದರಾದ ಈಶಾನ ಶಿವಾಚಾರ್ಯರು ತಮ್ಮ "ಪದ್ಧತಿ" ಎಂಬ ಗ್ರಂಥದಲ್ಲಿ—

ಶಿವಾಗಮಾಶ್ಚ ವೇದಾಶ್ಚ ನಿತ್ಯಾ ಏವ ಪ್ರಮಾಣತಃ ||
ನಿತ್ಯಾಃ ಶಿವಾಗಮಾವೇದ್ಯೈಃ ಶಿವೇನಾದಾವಭೇದತಃ ||
ನಿತ್ಯಸ್ಥಿತಾಸ್ತ್ವಭಿವ್ಯಕ್ತಾಸ್ತಸ್ಮಿಂಸ್ತೇಽನಾದಯೋ ಯತಃ ||

ಶಿವಾಗಮಗಳೂ ವೇದಗಳೂ ನಿತ್ಯವಾದ ಪ್ರಮಾಣಗಳಾಗಿವೆ ಏಕೆಂದರೆ ಶಿವನು ಅನಾದಿಸಿದ್ಧನೂ, ನಿತ್ಯನೂ ಆಗಿದ್ದಾನೆ. ಅವನಲ್ಲಿ ಅಭೇದರೂಪ ದಿಂದ ಶಿವಾಗಮಗಳು ವೇದಗಳೊಂದಿಗೆ ಅನಾದಿ ನಿತ್ಯಸಿದ್ಧಗಳಾಗಿರತಕ್ಕುವು ಹೀಗೆ ಅನಾದಿಯೂ, ನಿತ್ಯನೂ ಆದ ಶಿವನಿಂದ ಅಭಿವ್ಯಕ್ತಗಳಾದ ಆಗಮ ಗಳೂ ವೇದಗಳೂ ಅನಾದಿನಿತ್ಯ ಪ್ರಮಾಣಗಳಾಗಿವೆಯೆಂದು ಸಾರಿರುವರು ಆದುದರಿಂದ ವೈದಿಕೀ ತಾಂತ್ರಿಕೀ ರೂಪ ಶ್ರುತಿಯು ದ್ವಿದಳ ಧಾನ್ಯದಂತೆ ಆವಿರ್ಭಾವಗೊಳ್ಳುತ್ತಿದ್ದರೂ, ಅವು ಶಿವನಲ್ಲಿ ಅಭೇದವಾಗಿರುತ್ತಿವೆ ವೇದ ಗಳ ಕಾಲ ನಿಶ್ಚಯವಾಗಿ ನಿರ್ಣಯವಾಗಿಲ್ಲವೆಂದು ಡಾ|| ಎಸ್ ಸಿ ನಂದೀಮಠ, ಎಮ್ ಎ., ಪಿ ಎಚ್ ಡಿ, ಅವರು ತಮ್ಮ "ಕರ್ನಾಟಕ ಧರ್ಮಗಳು" ಎಂಬ ಗ್ರಂಥದ ೧೫೫ ನೆಯ ಪುಟದಲ್ಲಿ ಅಭಿಪ್ರಾಯಪಟ್ಟಿ ರುವರು ಅದಕಾರಣ ವೇದಕಾಲವು ಅನಾದಿಯಾಗಿದೆ ಅದುಕಾರಣ ಇಂತಪ್ಪ ಅನಾದಿಯಾದ ವೇದಕಾಲಸಾವುದೋ ಅದೇ ಶಿವಾಗಮ ಕಾಲ ವೆಂದು ಸಿದ್ಧವಾಗುತ್ತಿದೆ.

# ಶಿವಾಗಮ ನಿರೂಪಿತ ವೀರಶೈವ

ವೀರಶೈವವು ಶಿವಾಗಮಗಳಿಂದಲೇ ನಿರೂಪಿಸಲ್ಪಡುವದು ಈಬಗ್ಗೆ ಚಂದ್ರಜ್ಞಾನಾಗಮದ ಕ್ರಿ ವಾ ೧೧ನೆಯ ಪಟದಲ್ಲಿ—

**ವೀರಶೈವಂ ಪ್ರವಕ್ಷ್ಯಾಮಿ ವಿದಿತಂ ಶ್ರುತಿತಂತ್ರಯೋಃ**
**ಶ್ರೌತಂ ಸ್ವತಂತ್ರಮಿತಿಚ ದ್ವಿವಿಧಂ ಪರಿಕೀರ್ತಿತಂ ॥೩೦॥**
**ವರ್ಣಾಶ್ರಮಿಯ ಧರ್ಮಾಢ್ಯಂಶ್ರೌತ ಮಿತ್ಯಭಿಧೀಯತೇ ॥**
**ತದೀಯಧರ್ಮರಹಿತಂ ಸ್ವತಂತ್ರಮಿತಿ ಕಥ್ಯತೇ ॥೩೧॥**

ವೇದಾಗಮಗಳಲ್ಲಿ ವಿದಿತವಾದ ವೀರಶೈವವನ್ನು ಹೇಳುವೆನು ಇದು ಶ್ರೌತ ಮತ್ತು ಸ್ವತಂತ್ರವೆಂದು ಎರಡು ತೆರನಾಗಿದೆ ವರ್ಣಾಶ್ರಮ ಧರ್ಮದಿಂದ ಆಢ್ಯವಾದುದೇ ಶ್ರೌತವೆಂದು ಹೇಳಲ್ಪಡುತ್ತಿದೆ ಆ ವರ್ಣಾಶ್ರಮಿಯ ಧರ್ಮದಿಂದ ರಹಿತವಾದುದು ಸ್ವತಂತ್ರವೆಂದು ಹೇಳಲ್ಪಡುತ್ತಿದೆ

ಹೀಗೆ ಪರಮೇಶ್ವರನಿಂದ ಹೇಳಲ್ಪಟ್ಟ ವೀರಶೈವವು ಧರ್ಮಬದ್ಧವೂ ಧರ್ಮಸ್ವತಂತ್ರವೂ ಎಂದು ಎರಡು ತೆರನಾಗಿದೆ ಕತ್ತಲೆಯ ಕಳವಳವನ್ನರಿತಲ್ಲದೆ ಪರಿಶ್ರಮದಿಂದ ಬೆಳಕಿನ ಯೋಗ್ಯತೆಯು ಬಾರದು ದುಃಖದ ಮರ್ಮವನರಿತಲ್ಲದೆ ಪ್ರಯತ್ನದಿಂದ ಸುಖದ ಅನುಭವವು ತೋರದು ಸ್ವೇಚ್ಛವಾದ ಹಸಿವೆಯನ್ನರಿತಲ್ಲದೆ ವ್ಯಾಯಾಮದಿಂದ ಭೋಜನ ತೃಪ್ತಿಯಾಗದು ಭಕ್ತ-ಮಾಹೇಶ್ವರ-ಪ್ರಸಾದಿ ಸ್ಥಲಗಳನ್ನರಿತಲ್ಲದೆ ಕರ್ಮಯೋಗದಿಂದ ನಿರ್ಮಲಚಿತ್ತವು ಆಗದು. ಅದುಕಾರಣ § "ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ? "ಕರ್ಮಯೋಗ"ವ ಮಾಡದೆ ನಿರ್ಮಲ ಸುಚಿತ್ತವನರಿವಪರಿ ಇನ್ನೆಂತೋ ? ಬೇಯದೆ ಅಶನವನುಂಬರಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ " ಎಂಬ ಶ್ರೀಶಿದ್ಧರಾಮಯ್ಯಗಳ ವಚನವು ನಿದರ್ಶನಮಾಗಿ, ಪ್ರಥಮದೋಳ್ ಭಕ್ತ-ಮಾಹೇಶ್ವರ ಪ್ರಸಾದಿ-ಪ್ರಾಣಲಿಂಗಿ-ಶರಣ ಐಕ್ಯವೆಂಬ ಷಟ್‌ಸ್ಥಲ ರೂಪಾತ್ಮಕವಾದಾ ಪರಶಿವತತ್ವವು ನಿಷ್ಕಲ ಸಕಲವೆಂದು ದ್ವಿವಿಧವಾದುದರಿಂದ ಷಟ್‌ಸ್ಥಲಂ

---

§ ವಚನ ಧರ್ಮಸಾರದ ಪುಟ ೯೦ ರಿಂದ

ಗಳು ದ್ವಿವಿಧವಾಗಿ ಅವರೋಳ್ ಭಕ್ತ–ಮಾಹೇಶ್ವರ–ಪ್ರಸಾದಿ ಸಂಜ್ಞಿತರೂ, ಸಕಲ ತತ್ವಾತ್ಮಕ ಮಾಹೇಶ್ವರ ಕರ್ಮನಿಷ್ಠರೂ ಆದ ವೀರ ಮಾಹೇಶ್ವರರಿಗೆ ಕರ್ಮಯಜ್ಞದೋಳಭಿರತಿಯುಂಟಾಗಿ ಆ ಕರ್ಮಯೋಗಮಂ ನಿರೂಪಿಸುವುದಾದ್ಯ ಕರ್ತವ್ಯಮೆಂಬೀ ಉದ್ದೇಶದಿಂದ ಮೇಲ್ಕಂಡ ಶಿವವಚನವು ಮೊದಲು ವರ್ಣಬದ್ಧ ವೀರಶೈವವನ್ನು ನಿರೂಪಿಸಿ ನಂತರ ವರ್ಣಾಶ್ರಮರಹಿತವಾದ ಸ್ವತಂತ್ರ ವೀರಶೈವವನ್ನು ನಿರೂಪಿಸಿದೆ ಇಲ್ಲಿ ಕ್ರಮಪ್ರಾಪ್ತವಾದುದರಿಂದ ಮೊದಲು ಶ್ರೌತ ಪದದ ಬಗ್ಗೆ ಕಿಂಚಿದ್ ವಿಮರ್ಶಿಸುವ

## ಶ್ರೌತ ವಿಚಾರವು ಸಾಂಸ್ಕೃತಿಕ ಮೂಲವು

ಚಂದ್ರಜ್ಞಾನಾಗಮವಿಲ್ಲಿ ವೀರಶೈವ ಲಕ್ಷಣವನ್ನು ನಿರೂಪಿಸುವಾಗ ಶ್ರೌತ ಸ್ವತಂತ್ರವೆಂಬ ವಿಭಾಗವಲ್ಲಿ ಶ್ರೌತವು ವರ್ಣಾಶ್ರಮಬದ್ಧವೆಂದು ಉದ್ಘೋಷಿಸಿದ ಅದುಕಾರಣ ಭಗವತ್ಪಾದ ರೇಣುಕರು—

ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾಮತಾ ||
ಏಕಾಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾಪರಾ ||
—ಸಿ ಶಿ ಪರಿ ೧೦ ಶ್ಲೋ ೬

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೊದಲಾದ ವರ್ಣಗಳೂ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸವೆಂಬ ಆಶ್ರಮಗಳೂವುಳ್ಳ ವರ್ಣಾಶ್ರಮಾದಿ ಧರ್ಮಗಳ ವ್ಯವಸ್ಥೆಯು ಎರಡು ಪ್ರಕಾರವಾಗಿದೆ ಒಂದು ಶಿವನಿಂದ ನಿರ್ದಿಷ್ಟವಾದುದು, ಮತ್ತೊಂದು ಬ್ರಹ್ಮನಿಂದ ಹೇಳಲ್ಪಟ್ಟುದು ಎಂದು ಅಪ್ಪಣೆಗೈದಿರುವರು

ಇದರಿಂದ ಅಪ್ರಾಕೃತ ವರ್ಣಾಶ್ರಮ ಧರ್ಮಗಳು ವೀರಶೈವರಿಗೆ ಶಿವನಿಂದುಕ್ತವಾಗಿವೆಯೆಂದೂ, ಪ್ರಾಕೃತ ವರ್ಣಾಶ್ರಮ ಧರ್ಮಗಳು ಇತರರಿಗೆ ಬ್ರಹ್ಮನಿಂದುಕ್ತವಾಗಿವೆಯೆಂದೂ ತಿಳಿಯುತ್ತಿದೆ ಅದುಕಾರಣ ಶ್ರೀಮನ್ಮಂತೋಂಟದಾರ್ಯರು ತಮ್ಮ ವೀರಶೈವಾನಂದ ಚಂದ್ರಿಕೆಯ ಳಿಳ ನಯ ಪುಟದಲ್ಲಿ ಕಂಠೋಕ್ತಿಯಿಂದಲೇ—

"ಸರ್ವವರ್ಣೋತ್ತೀರ್ಣಾನಾಮ ಪ್ರಾಕೃತ ಬ್ರಾಹ್ಮಣಾದಿ ಧರ್ಮ ನಿರತತಯಾ ಪರಿದೃಶ್ಯಮಾನಾನಾಂ ವೀರಶೈವಾನಾಂ ಸರ್ವೋತ್ತ ಮತ್ವಂ ನಿರ್ವಿವಾದಂ"

ಎಂದಾಜ್ಞೆಗೈದಿರುವರು ಈ ಪಂಕ್ತಿಗಳ ಅರ್ಥವು ಹೀಗಿದೆ—

ಎಲ್ಲ ಪ್ರಾಕೃತ ವರ್ಣಗಳಿಗೆ ಮಿಗಿಲಾಗಿಯೂ, ಅಪ್ರಾಕೃತ ಬ್ರಾಹ್ಮಣಾದಿ ಧರ್ಮಗಳಲ್ಲಿ ನಿರತರಾಗಿಯೂ ಇರುವ ವೀರಶೈವರಿಗೆ ಸರ್ವೋತ್ತ ತ್ತಮತ್ವವು ನಿರ್ವಿವಾದ ಸಿದ್ಧವಾಗಿದೆ

ಇಲ್ಲಿ "ಅಪ್ರಾಕೃತ ಬ್ರಾಹ್ಮಣಾದಿ ಧರ್ಮನಿರತತಯಾ, ಎಂಬಲ್ಲಿ ಆದಿಪದದಿಂದ ಅಪ್ರಾಕೃತ ಬ್ರಾಹ್ಮಣ, ಅಪ್ರಾಕೃತ ಕ್ಷತ್ರಿಯ, ಅಪ್ರಾಕೃತ ವೈಶ್ಯ ಮೊದಲಾದ ವರ್ಣಗಳೂ, "ಶಿವೋಕ್ತ ಧರ್ಮನಿಷ್ಠಾತು ಶಿವಾಶ್ರಮ ನಿಷೇವಿಣಾಂ ಎಂಬೀ ರೇಣುಕಪಾದರ ವಚನದಂತೆ ಅಪ್ರಾಕೃತ ಬ್ರಹ್ಮಚರ್ಯ ಮೊದಲಾದ "ಶಿವಾಶ್ರಮ"ಗಳೂ ಅಭಿವ್ಯಕ್ತವಾಗುತ್ತಿದ್ದು, ಅಂತಹವರ್ಣಾಶ್ರಮಧರ್ಮನಿರತತ್ವವೇ ಮುಖ್ಯವಾದವರು ವೀರಶೈವರು

ಮತ್ತು ಇಂತಹ ವೀರಶೈವರ ಸರ್ವೋತ್ತಮತ್ವಕ್ಕೆ ಸಾಧನವಾದ ಅಪ್ರಾಕೃತ ವರ್ಣಾಶ್ರಮಧರ್ಮವನ್ನು ಅಲ್ಲಗಳೆಯಲುಜ್ಜುಗಿಸುವ ಅಜ್ಞರಾದ ಅನ್ಯವಾದಿಗಳ ನಾಲಿಗೆಯನ್ನೆತ್ತದಂತೆ ಅವರ ಬಾಯಿಗೆ ಬೀಗವನ್ನು ಜಡಿದು, ಅವರಿಗೆ ಇದು ಪರಮತಾತ್ವಿಕವೆಂದು ನಿರ್ಣಯಿಸಲು "ಶಿವಶಾಸ್ತ್ರ"ವೇ ಮುಖ್ಯವೆಂದು ತಮ್ಮ ಅಂತರಂಗಿಕ ನಿರ್ಧಾರವನ್ನಿಟ್ಟುಕೊಂಡೇ "ನಿರ್ವಿವಾದ" ಪದಪ್ರಯೋಗದಿಂದ ಶ್ರೀಮನ್ಮರಿ ತೋಂಟದಾರ್ಯರು ವೀರಶೈವ ಬ್ರಾಹ್ಮಣ ಮೊದಲಾದವರ ಸರ್ವೋತ್ತಮತ್ವವನ್ನು ಸಿದ್ಧಗೊಳಿಸಿರುವರು.

ಇದೇ ಬಗೆಯಿಂದ "ವೀರಶೈವ ಧರ್ಮಶಿರೋಮಣಿ, ಕಾರನು ತನ್ನ "ವೀರಶೈವಧರ್ಮಶಿರೋಮಣಿಯಲ್ಲಿ ೨೦೭ನೆಯ ಪುಟದಲ್ಲಿ—

" ದೀಕ್ಷಿತಾನಾಂ ದ್ವಿಜಾತೀನಾಂ ಸ್ತ್ರೀಶೂದ್ರಾಣಾಂತಥೈವಚ ||
ಲಿಂಗೇಸ್ವಗುರುಣಾದತ್ತೇ ಪೂಜಾನಾನ್ಯತ್ರಚೋದಿತಾ ||

ಎಂಬುದಾಗಿ ಹೇಳುವಲ್ಲಿ ದೀಕ್ಷಿತರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ದ್ವಿಜಾತಿಯವರಾದ ವೀರಶೈವ "ಶ್ರೌತ"ರನ್ನು ನಿರ್ದೇಶಿಸಿರುವನು ಮತ್ತು ೧೪೨ನೆಯ ಪುಟದಲ್ಲಿ—

" ಬ್ರಾಹ್ಮಣಾದಿ ವರ್ಣಾನಾಮೇತನ್ಮತ ಪ್ರವಿಷ್ಟಾನಾಂ
ವರ್ಣಭೇದೋ ನಾಸ್ತೀತಿ ಪ್ರತೀಯತೇ "

ಈ ವೀರಶೈವ ಮತದಲ್ಲಿ— ಪ್ರವೇಶ ಮಾಡಿದ ಬ್ರಾಹ್ಮಣ, ಕ್ಷತ್ರಿಯ ಮೊದಲಾದ ಪ್ರಾಕೃತವರ್ಣಿಗಳಿಗ ಅಪ್ರಾಕೃತ ಶಿವದೀಕ್ಷೆಯಾದಬಳಿಕ, ಆ ವರ್ಣಭೇದವೇ ಇಲ್ಲವಾಗುತ್ತಿದೆಯೆಂದು ತಿಳಿಯಲ್ಪಡುತ್ತಿದೆ " ಎಂಬುದಾಗಿ ಪ್ರಾಕೃತವರ್ಣನಿರಸನವನ್ನು ಪ್ರತಿವಾದಿಸುತ್ತ, ಮುಂದೆ ಇದೇ ೧೪೩ನೆಯ ಪುಟದಲ್ಲಿ— " ಸಂಪ್ರದಾಯ ಶುದ್ಧ ವೀರಶೈವ ಮತಾನುಗಾ ಬ್ರಾಹ್ಮಣಾದಯಃ " ಎಂದೂ "ಇತ್ಯಾದಿನಾ ಆಶ್ರಮಚತುಷ್ಟಯವಿಧಾನಾತ್" † ಎಂದೂ ಬ್ರಾಹ್ಮಣಾದಿ ವರ್ಣಗಳೂ ಶಿವಬ್ರಹ್ಮಚರ್ಯಾದ್ಯಾಶ್ರಮಗಳೂ ವೀರಶೈವರಲ್ಲಿ ಉಂಟೆಂದು, ಅಪ್ರಾಕೃತ ವರ್ಣಾಶ್ರಮಗಳನ್ನು ಸಾರಿರುವನು

**ಗೌತಮಸ್ಮೃತಿಯಲ್ಲಿ—** "ಮುಖೇಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ ॥ ಶಿಖಾರುದ್ರಾಕ್ಷ ಭಸ್ಮಾನಿ ಇತಿಬ್ರಾಹ್ಮಣಲಕ್ಷಣಂ ॥" ಎಂಬೀ ಪ್ರಮಾಣವನ್ನು ವಿವೇಚಿಸುತ್ತ— ಇಲ್ಲಿ ಆರು ಧರ್ಮಗಳು ವೀರಶೈವ ಬ್ರಾಹ್ಮಣ ಲಕ್ಷಣವಾಗಿವೆಯೆಂದರೆ— ಲಕ್ಷಣವಿದು " ವೀರಶೈವ ಕ್ಷತ್ರಿಯ, "ವೀರಶೈವ ವೈಶ್ಯ"ರುಗಳಲ್ಲಿ ಅತಿ ಪ್ರಸಕ್ತವಾಗುವದೆಂದು ಆಕ್ಷೇಪಿಸಿ—ಅದಕ್ಕುತ್ತರವು "ಬ್ರಾಹ್ಮಣತ್ವ ವಿಶಿಷ್ಟ ಷಡ್ವಿಧ ಧರ್ಮವುಳ್ಳತನವು ಲಿಂಗಾಂಗಿ ಬ್ರಾಹ್ಮಣಲಕ್ಷಣವೆಂದು ಹೇಳಲು ಅತಿ ಪ್ರಸಕ್ತಿಯಾಗದೆಂದು ಶ್ರೀನಂದಿಕೇಶ್ವರ ಶಿವಾಚಾರ್ಯರು ತಮ್ಮ ಲಿಂಗಧಾರಣಚಂದ್ರಿಕೆಯಲ್ಲಿ—

ನನ್ವೇವಮೇವ ಲಿಂಗಾಂಗಿ ಬ್ರಾಹ್ಮಣೋದ್ದೇಶೇನ ಮನ್ತ್ರಧ್ಯಾನಾದಿ ಷಡ್ವಿಧ ಧರ್ಮಸಮುದಾಯಸ್ಯ ಲಕ್ಷಣಕರಣೇ ತಥಾವಿಧಕ್ಷತ್ರಿಯಾದಾವತಿ

---

† ವೀ ಶೈ ಧ ಶಿ ಪುಟ ೨೨೧

ಪ್ರಸಕ್ತಮಿತಿ ಚೇನ್ನ | ಇತಿಬ್ರಾಹ್ಮಣಲಕ್ಷಣ ಮಿತಿವಾಕ್ಯಾನುರೋಧೇನ ಬ್ರಾಹ್ಮಣತ್ವೇಸತಿ ಷಡ್ವಿಧ ಧರ್ಮವತ್ತ್ವಂ ಲಿಂಗಾಂಗಿ ಬ್ರಾಹ್ಮಣಾನಾಂ ಲಕ್ಷಣಮಿತ್ಯತ್ರ ತಾತ್ಪರ್ಯಾವಸಾಯಾತ್ " ಎಂಬುದಾಗಿ ವೀರಶೈವ ಬ್ರಾಹ್ಮಣ, ವೀರಶೈವ ಕ್ಷತ್ರಿಯ, ವೀರಶೈವ ವೈಶ್ಯರೆಂಬ "ಶ್ರೌತ"ರನ್ನು ಹೇಳಿದ್ದಾರೆ ಆದುದರಿಂದಲೇ ಕಾರಣಾಗಮದ ೧೦ನೆಯ ಪುಟದಲ್ಲಿ—

ವರ್ಣಾಶ್ರಮೀಯಧರ್ಮಾಢ್ಯಂ ಷಟ್‌ಸ್ಥಲಜ್ಞಾನ ಸಂಯುತಂ ||
ವಿಶಿಷ್ಟಮಷ್ಟಾವರಣೈಃ ಪಂಚಾಚಾರಾಭಿಮಂಡಿತಂ || ೫೬ ||
ಸದ್ಯಃ ಪಾಶಕ್ಷಯಕರಂ ಕರ್ಮಜ್ಞಾನ ಸಮುಚ್ಚಯಂ "

ಅಷ್ಟಾವರಣ ವಿಶಿಷ್ಟವೂ, ಪಂಚಾಚಾರ ಭೂಷಿತವೂ, ಷಟ್‌ಸ್ಥಲಜ್ಞಾನ ಸಂಯುತವೂ, ಕರ್ಮಜ್ಞಾನ ಸಮುಚ್ಚಯವೂ, ಸದ್ಯಃ ಪಾಶಕ್ಷಯಕಾರಿಯೂ ಆದ ವೀರಶೈವವು ವರ್ಣಾಶ್ರಮ ಧರ್ಮದಿಂದ ಆಢ್ಯವಾಗಿದೆಯೆಂದು ಹೇಳದೆ ಶ್ರೀ ನಿಜಗುಣ ಶಿವಯೋಗಿಗಳ "ಪಾರಮಾರ್ಥ ಪ್ರಕಾಶಿಕೆ" ಗೆ ಮೂಲಾಧಾರವಾದ "ಶಿವಯೋಗ ಪ್ರದೀಪಿಕೆ" ಯಲ್ಲಿ ಗುರುಲಕ್ಷಣ ಕಥನ ಪ್ರಸಂಗದಲ್ಲಿ—

ಆದೌವರ್ಣಾಶ್ರಮಾಚಾರೋ ಗುರೌಬ್ರಹ್ಮಜ್ಞತಾಸ್ತಿಚೇತ್ |
ಭಜೇತ್ತಮೇವ ಯತ್ನೇನ ನೋಚೇದನ್ಯಗುರುಂ ವ್ರಜೇತ್ ||

—ಶಿ ಪ್ರ ಪಟಲ ೪ ಶ್ಲೋಕ ೧೭

ಶಿಷ್ಯನು ಪ್ರಥಮದಲ್ಲಿ ವರ್ಣಾಶ್ರಮಾಚಾರವು ಗುರುವಿನಲ್ಲಿದ್ದು, ಬ್ರಹ್ಮಜ್ಞತೆಯೂ ಇದ್ದರೆ ಅಂತಹ ಅದೇ ಗುರುವನ್ನೇ ಯತ್ನಪೂರ್ವಕವಾಗಿ ಹೊಂದಬೇಕು ಆದಿಲ್ಲದಿದ್ದರೆ ಅಂತಪ್ಪ ವರ್ಣಾಶ್ರಮಾದಿಕಮುಳ್ಳ ಅನ್ಯಗುರುವನ್ನು ಹೊಂದಬೇಕು ಎಂದು ನಿರೂಪಿತವಾಗಿದೆ ಅದುಕಾರಣ ನಿಗಮಾಗಮ ರಹಸ್ಯವಾದ ಕ್ರಿಯಾಸಾರದಲ್ಲಿ—

ವರ್ಣಾಶ್ರಮಕ್ರಿಯಾನಿಷ್ಠೋ ಧರ್ಮವಿಚ್ಛಾಸ್ತ್ರಕೋವಿದಃ

—ಕ್ರಿ ಸಾ ೮೬ ೨೫ ಶ್ಲೋಕ ೧೭

ಗುರುವಾದಾತನು ವರ್ಣಾಶ್ರಮ, ಕ್ರಿಯಾನಿಷ್ಠನೇ ಇರಬೇಕೆಂಬುದು ಘಂಟಾಘೋಷವು

ಇದರಿಂದ ವೀರಶೈವ ದೀಕ್ಷಾಗುರುವಿನಲ್ಲಿಯೂ ಕೂಡ ವರ್ಣಾಶ್ರಮಾಚಾರವು ಇರಬೇಕಾದುದು ತಿಳಿದು ಬರುವುದರಿಂದ ವೀರಶೈವರಲ್ಲಿ ವರ್ಣಾಶ್ರಮಗಳ ಅಗತ್ಯವು ಎಷ್ಟಿದೆಯೆಂಬುದು ತಿಳಿಯುತ್ತಿದೆ

ಅತೋವರ್ಣಾಶ್ರಮಾಚಾರೋ ನಿಗಮಾಗಮ ಚೋದಿತಃ ||
ಅವಶ್ಯಂ ಸಮನುಷ್ಠೇಯಸ್ಸತತಂ ಭಕ್ತತತ್ಪರೈಃ || ೧೬ ||
—ಚಂ ಜ್ಞಾ ಪ ೧೨

ಆದುದರಿಂದ ವರ್ಣಾಶ್ರಮಾಚಾರವು ನಿಗಮ ಮತ್ತು ಆಗಮಗಳಲ್ಲಿ ಚೋದಿತವಾಗಿರುವ ಮೂಲಕ ಭಕ್ತತತ್ಪರರಿಂದ ಅವಶ್ಯವಾಗಿ ಅನುಷ್ಠಿಸಲರ್ಹವಾಗಿದೆ ಎಂದು ಶಿವವಚನವು ಜಾಗರೂಕವಾಗಿದೆ ಶ್ರೀಕರ ಭಾಷ್ಯದ ೩೫ನೆಯ ಪುಟದಲ್ಲಿ—

ವಿದ್ಯಾಂಚಾ ವಿದ್ಯಾಂಚ ಯಸ್ತದ್ವೇದೋ ಭಯಂಸಹ ||
ಅವಿದ್ಯಯಾ ಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ ||
ಇತ್ಯಾದಿ ಶ್ರುತಿಷು ||
ವರ್ಣಾಶ್ರಮೋಚಿತಂ ಧರ್ಮಮವಿದ್ಯೇತಿ ನಿರೂಪ್ಯತೇ ||
ತಯಾಪ್ರಾಚೀನ ಕರ್ಮಾಣಿ ಹಿತ್ವಾಜ್ಞಾನಂ ಸಮಶ್ನುತೇ ||
ಜ್ಞಾನೇನಮುಕ್ತಿಮಾಪ್ನೋತಿ ತಸ್ಮಾತ್ಕರ್ಮಸಮಭ್ಯಸೇತ್ ||

“ವಿದ್ಯಾಂಚಾ ವಿದ್ಯಾಂಚ” ಇತ್ಯಾದಿ ಶ್ರುತಿಗಳಲ್ಲಿ ವರ್ಣಾಶ್ರಮೋಚಿತ ಧರ್ಮಕ್ಕೆ ಅವಿದ್ಯೆಯೆಂದು ನಿರೂಪಿಸಲ್ಪಡುತ್ತಿದೆ ಅದರಿಂದ ಪ್ರಾಚೀನ ಕರ್ಮಗಳನ್ನು ತೊಲಗಿ ಜ್ಞಾನವನ್ನು ಹೊಂದುತ್ತಾನೆ ಜ್ಞಾನದಿಂದ ಮುಕ್ತಿಯನ್ನು ಹೊಂದುತ್ತಾನೆ ಆದುದರಿಂದ ವರ್ಣಾಶ್ರಮಾದಿಕ ಕರ್ಮವನ್ನು ಚನ್ನಾಗಿ ಅಭ್ಯಸಿಸತಕ್ಕದ್ದು ಎಂದು ಶ್ರುತಿ ಸ್ಮೃತಿ ಪ್ರಮಾಣಗಳು ತೋರಿಸಲ್ಪಟ್ಟಿವೆ ಮತ್ತು ಸ್ಕಂದ ಪುರಾಣದ ಶಂಕರಸಂಹಿತೆಯಲ್ಲಿ—

ತಸ್ಮಾನ್ಮಾಹೇಶ್ವರೋ ವಿಪ್ರಃ ಶ್ರುತಿಸ್ಮೃತ್ಯಾಗಮೋದಿತಂ ||
ವರ್ಣಾಶ್ರಮೋಚಿತಂ ಧರ್ಮಂ ಪ್ರಾಣತ್ಯಾಗೇಽಪಿನತ್ಯಜೇತ್ ||

ಆದುದರಿಂದ ಮಾಹೇಶ್ವರನಾದ ವಿಪ್ರನು ಶ್ರುತಿ-ಸ್ಮೃತಿ ಆಗಮಗಳಲ್ಲಿ ಹೇಳಿದ ವರ್ಣಾಶ್ರಮೋಚಿತ ಧರ್ಮವನ್ನು ಪ್ರಾಣತ್ಯಾಗದಲ್ಲಿಯಾದರೂ ಬಿಡಬಾರದು ಎಂದೂ,

ವರ್ಣಾಶ್ರಮ ಸದಾಚಾರಾಃ ಶಿವೇನಕಥಿತಾಃಪುರಾ ||
ಯೇತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ ||
ರಾಜಾಜ್ಞಾಭಂಗಕೃನ್ನೄಣಾಂ ದಂಡೋಹಿ ನರಕಸ್ತಥಾ ||

ಪೂರ್ವದಲ್ಲಿ ವರ್ಣಾಶ್ರಮ ಸದಾಚಾರಗಳು ಶಿವನಿಂದ ಹೇಳಲ್ಪಟ್ಟವೆ ಯಾರು ಅವುಗಳನ್ನು ಮೀರಿ ನಡೆಯುತ್ತಿಹರೋ ಅವರು ಶಿವನಾಜ್ಞೆಯನ್ನು ಅಪಲಪಿಸುವವರು ರಾಜಾಜ್ಞಾಭಂಗಗೊಳಿಸಿದ ನರರಿಗೆ ದಂಡವು ಹೇಗೋ ಹಾಗೆ ಶಿವಾಜ್ಞೆಯ ಅಪಲಾಪಿಗಳಿಗೆ ನರಕವು ಸಿದ್ಧವಾದುದು ಎಂದೂ ಸಾರುತ್ತಿದೆ

ಪದವಾಕ್ಯ ಪ್ರಮಾಣಜ್ಞರಾದ ಶ್ರೀಮರಿತೋಂಟದಾರ್ಯರ "ವೀರ ಶೈವಾನಂದ ಚಂದ್ರಿಕ"ಯ ೪೫೦ನೆಯ ಪುಟದಲ್ಲಿದ್ದ "ವೀರಶೈವ ಸಮಯ ಪ್ರವರ್ತಕಾನಾಂ ರೇಣುಕಾದೀನಾಂ" "ತಥಾಚಗೋತ್ರ ಪ್ರವರ್ತಕಾನಾಂ ರೇಣುಕಾದ್ಯಾಚಾರ್ಯಾಣಾಂ" ಎಂಬ ಸಮಸ್ತ ಪದಗಳೆರಡನ್ನು ನೆನಸಿ ಕೊಂಡರೆ, ವೀರಶೈವ ಸಮಯಪ್ರವರ್ತಕರಾದ ರೇಣುಕಾದ್ಯಾಚಾರ್ಯರಿಗೆ ಗೋತ್ರಪ್ರವರ್ತಕತೆಯೂ ಉಂಟೆಂಬುದು ಸ್ಪಷ್ಟವಾಗುತ್ತಿದೆ

ಇದರಿಂದ ಮೇಲ್ಕಂಡ ಚಂದ್ರಜ್ಞಾನಾಗಮ ನಿರೂಪಿತ ಶ್ರೌತ ವೀರ ಶೈವರಿಗೆ ವರ್ಣಾಶ್ರಮಾದಿಗಳನ್ನು ಸಾರುವುದರಿಂದ ಗೋತ್ರಗಳನ್ನು ಹೇಳ ಬೇಕಾದುದು ಅತ್ಯವಶ್ಯಕವಿರುವುದು. ಅದು ಹೇಗೆಂದರೆ—

ಋಗ್ವೇದದಲ್ಲಿ ಕೆಲ ಋಷಿಗಳು ಅಂಗಿರಸಗಣ, ಭೃಗುಗಣ, ಸಪ್ತ- ರ್ಷಿಗಣ, ದಿವ್ಯಗಣ ಎಂಬುದಾಗಿ ಗಣರೂಪತ್ವದಿಂದ ಶ್ರವಣಮಾಡಲ್ಪಡು ತ್ತಾರೆ 'ಗಣ' ಎಂದರೆ ಸಮೂಹ ಅಥವಾ ವರ್ಗವೆಂದರ್ಥವು. ಈ ದಿವ್ಯ ಗಣಕ್ಕೇನೇ ಪ್ರಥಮಜರು, (ಪ್ರಮಥರು) ಎಂದು ವೇದಗಳಲ್ಲಿ ಪ್ರಸಿದ್ಧವಿದೆ ಅಥರ್ವ ಸಂಹಿತೆಯ— 'ಯತ್ರ ಋಷಯಃ ಪ್ರಥಮಜಾಃ' (೧೦–೭–೧೪) ಎಂಬುದಾಗಿ ಪ್ರಥಮಜರೆಂಬುದಕ್ಕೆ ಪ್ರಮಾಣವಿದೆ.

ಸದ್ಯೋಜಾತಶ್ಚಪ್ರಥಮೋ ವಾಮದೇವೋದ್ವಿತೀಯಕಃ
ಅಘೋರಶ್ಚತೃತೀಯಸ್ತು ತತ್ಪುರುಷಶ್ಚತುರ್ಥಕಃ ||
ಈಶಾನಃ ಪಂಚಮಶ್ಚೇತಿ || ಎಂಬೀ ಶಿವಾಗಮಪ್ರಮಾಣದಂತೆ

ಸದ್ಯೋಜಾತ ವಾಮದೇವ ಅಘೋರ ತತ್ಪುರುಷ- ಈಶಾನರೆಂಬ ಪಂಚ ಬ್ರಹ್ಮಮೂರ್ತಿಗಳೇ ಪ್ರಥಮಜರಿರುವರು ಇವರಿಂದ ಅತಿವರ್ಣಾಶ್ರಮಿಗಳಾದ ನಂದಿ ಮೊದಲಾದವರು ಸಂಭವಿಸಿದರು.

ಅತಿವರ್ಣಾಶ್ರಮಾಃ ಪೂರ್ವೇ ನಂದ್ಯಾದಿ ಪ್ರಮಥಾಃ ಸ್ಮೃತಾಃ ||
ತತ್ಸಂತತಿ ಸಮಾಯಾತಾ ವೀರಶೈವಾ ಇತಿಶ್ರುತಾಃ ||

ಪೂರ್ವದಲ್ಲಿ ನಂದಿ ಮೊದಲಾದ ಪ್ರಮಥರು ಅತಿವರ್ಣಾಶ್ರಮಿಗಳೆಂದು ಸ್ಮರಿಸಲ್ಪಟ್ಟರು "ವೀರೋನಂದೀತಥಾ ಭೃಂಗೀವೃಷಭಃಸ್ಕಂದ ಏವಚ" ಮತ್ಸ್ವರೂಪಾಸ್ಸಮುತ್ಪನ್ನಾಃ ಪಂಚಗೋತ್ರಾಧಿಕಾರಣಃ || ವೀರನಂದಿ ಭೃಂಗಿ-ವೃಷಭ-ಸ್ಕಂದರೆಂದು ಉತ್ಪನ್ನರಾದ ಶಿವಸ್ವರೂಪಿಗಳೇ ಪಂಚ-ಗೋತ್ರಾಧಿಕಾರಿಗಳು ಎಂಬೀ ಶಿವವಚನದಂತೆ ಆ ಸಂತತಿಯಿಂದ ಸಮಾಯಾತರೇ ವೀರಶೈವರೆಂದು ಪ್ರಸಿದ್ಧವು

ರೇಣುಕೋದಾರುಕಶ್ಚೈವ ಘಂಟಾಕರ್ಣಶ್ಚಧೇನುಕಃ ||
ವಿಶ್ವಕರ್ಣಶ್ಚಪಂಚೈತೇ ಪಂಚಗೋತ್ರ ಸಮುದ್ಭವಾಃ ಎಂಬೀ ಶಿವಾಗಮದಂತೆ ರೇಣುಕ- ದಾರುಕ- ಘಂಟಾಕರ್ಣ- ಧೇನುಕ- ವಿಶ್ವ-ಕರ್ಣರೆಂಬ ಐವರು ಆಚಾರ್ಯರು ಮೇಲ್ಕಂಡ ನಂದಿ ಮೊದಲಾದ ಪಂಚ-ಗೋತ್ರ ಸಮುದ್ಭವರಾಗಿದ್ದಾರೆ ಇವರೇ ಮೇಲೆ ಹೇಳಿದಂತೆ "ಗೋತ್ರ-ಪ್ರವರ್ತಕಾನಾಂ ರೇಣುಕಾದ್ಯಾಚಾರ್ಯಾಣಾಂ" ಎಂಬ ವಚನದ ಮೇರೆಗೆ "ಗೋತ್ರಪ್ರವರ್ತಕ" ರಿದ್ದು ಇವರಿಂದಲೇ ವೀರಶೈವದಲ್ಲಿ- "ಆಚಾರ್ಯ ಸಂಪ್ರದಾಯ"ವೆಂಬುದು ರೂಢವಾಗಿದೆ ಆಚಾರ್ಯ ಸಂಪ್ರದಾಯವು "ವೀರಶೈವಾಮೃತ ಪುರಾಣಾದಿ" ಗಳಲ್ಲಿ ಸ್ಪಷ್ಟವಾಗಿದೆ ಆದುದರಿಂದ ಇವರೇ ಕಲಿಯುಗದಲ್ಲಿ— ರೇವಣೋಮರುಲಶ್ಚೈವ ಏಕೋರಾಶ್ಚಪಂಡಿತಃ||
ವಿಶ್ವಾರಾಧ್ಯ ಇತಿಪ್ರೋಕ್ತಾಃ ಕಲೌಪಂಚಾರ್ಯನಾಮಕಾಃ ||

ರೇವಣ– ಮರುಲ– ಏಕೋರಾಮ– ಪಂಡಿತ– ವಿಶ್ವಾರಾಧ್ಯರೆಂಬ ಕಲಿ-ಯುಗದಲ್ಲವತರಿಸಿದ ಪಂಚಾಚಾರ್ಯರಿದ್ದಾರೆ ಅದುಕಾರಣ ಮೇಲ್ಕಂಡ ಚಂದ್ರಜ್ಞಾನಾಗಮೋಕ್ತರಾದ ಶ್ರೌತವೀರಶೈವರಿಗೆ ನಂದಿ– ಭೃಂಗಿ ಮೊದಲಾದ ಗೋತ್ರಗಳುಂಟೆಂಬ ಬಗ್ಗೆ ಮೇಲೆತೋರಿಸಿದ ಶಿವವಚನಗಳೇ ಸಾಕ್ಷಿಯಾಗಿವೆ ಈ ಅಭಿಪ್ರಾಯವನ್ನು ಶ್ರೀಮನ್ಮರಿತೋಂಟದಾರ್ಯರು ತಮ್ಮ ವೀರಶೈವಾನಂದಚಂದ್ರಿಕೆಯ ೪೫೨ನೆಯ ಪುಟದಲ್ಲಿ–

"ತಸ್ಮಾದ ಪ್ರಾಕೃತ ಬ್ರಾಹ್ಮಣಾನಾಂ ವೀರಶೈವಾನಾಂ ಗೋತ್ರಾದಿ ಸದ್ಭಾವಾತ್ ಸರ್ವೋತ್ತರತ್ವಂ ಸಿದ್ಧಂ"

ಅಪ್ರಾಕೃತ ಬ್ರಾಹ್ಮಣರಾದ ವೀರಶೈವರಿಗೆ ಗೋತ್ರಾದಿಗಳುಂಟು ಆದುದರಿಂದ ಇವರಿಗೆ ಸರ್ವೋತ್ತರತ್ವವು ಸಿದ್ಧವಾಗುತ್ತಿದೆ ಎಂದು ಆತ್ಮೀಯ ಕಂಠೋಕ್ತಿಯಿಂದಲೇ ಉದ್ಘೋಷಿಸಿರುವರು

ಮತ್ತು ಶ್ರೀಮರಿತೋಂಟದಾರ್ಯರು ತಮ್ಮ "ವೀರಶೈವಾನಂದ ಚಂದ್ರಿಕೆ"ಯ ೪೪೮ನೆಯ ಪುಟದಲ್ಲಿ "ಬ್ರಾಹ್ಮಣಾದ್ಯುತ್ಪತ್ತಿಸ್ತು ಪುರುಷ ಸೂಕ್ತೇಭಿಹಿತಾ" "ಬ್ರಾಹ್ಮಣೋಸ್ಯಮುಖ ಮಾಸೀದ್ ಬಾಹೂರಾಜನ್ಯಃ ಕೃತಃ ಊರೂತದಸ್ಯಯದ್ವೈಶ್ಯಃ ಪದ್ಭ್ಯಾಂಶೂದ್ರೋ ಅಜಾಯತ" ಇತಿ ವಿರಾಟ್ಪುರುಷಾದ್ಯತಥೋತ್ಪತ್ತಿ ಶ್ರವಣಾತ್ತದುಕ್ತದಿಷ್ಟ ಶೃತಿಸ್ಮೃತೀತಿಹಾಸ ಪ್ರಸಿದ್ಧ ವರ್ಣಾಶ್ರಮಾನುವರ್ತನತದತಿಕ್ರಮಣ ದ್ವಾರಕಾತ್ಯಾಶ್ರಮಾದಿ ಧರ್ಮಾಣಾಂ ಪ್ರತಿಪಾದನಾತ್ ತೇಷಾಂ ಬ್ರಾಹ್ಮಣಾನಾಂ ತದುದೀರಿತ ಧರ್ಮಾನುವರ್ತನಂಚ ವೀರಶೈವಾನಾಮ ಪ್ರಾಕೃತ ಬ್ರಾಹ್ಮಣತ್ವೇನ ತತ್ಸೃಷ್ಟಪರಮೇಶ್ವರ ತಾಲ್ವೋಷ್ಠ ಪುಟವ್ಯಾಪಾರಾದಿತಃ ಸ್ವತಃ ಪ್ರಮಾಣಭೂತ ಕಾಮಿಕಾದಿ ವಾತುಲಾಂತ ದಿವ್ಯಾಗಮೋಕ್ತ ಧರ್ಮಾನುವರ್ತನಂತು ಸ್ವಾನುಷ್ಠೇಯ ಧರ್ಮೋಪಪಾದಕಾಗಮಾ ವಿರು

ದ್ವಾಂಶ ಇತಿ ವಿವೇಕಃ" ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರ ಉತ್ಪತ್ತಿ ಯು ಪುರುಷಸೂಕ್ತದಲ್ಲಿ ಹೇಳಿದೆ ' "ಬ್ರಾಹ್ಮಣನು ಈ ಪರಬ್ರಹ್ಮದ ಮುಖವು ತೋಳುಗಳ ಜೋಡು ಕ್ಷತ್ರಿಯನು, ತೊಡೆಗಳ ಜೋಡು ವೈಶ್ಯನು, ಪಾದಯುಗ್ಮದಿಂದ ಶೂದ್ರನು ಹುಟ್ಟಿದನು" ಇಂತೆಂದು ವಿರಾಟ್ಪುರುಷನಿಂದುತ್ಪತ್ತಿಯನ್ನು ಕೇಳುವೆವಾದುದರಿಂದ ಅದೇ ಬ್ರಹ್ಮದಿಂದುಪದಿಷ್ಟವಾದುದೂ ಶೃತಿ-ಸ್ಮೃತೀತಿಹಾಸ ಪ್ರಸಿದ್ಧವಾದುದೂ ಆದ ವರ್ಣಾಶ್ರಮಾನುವರ್ತನ ಮತ್ತು ಅದರ ಅತಿಕ್ರಮಣವುಳ್ಳ ಅತ್ಯಾಶ್ರಮಾದಿ ಧರ್ಮಗಳ ಪ್ರತಿಪಾದನೆಯಿಂದ ಆ ಬ್ರಾಹ್ಮಣರಿಗೆ ಅದರಲ್ಲಿ ಹೇಳಿದ ಧರ್ಮಾನುವರ್ತನವಾದರೋ ವೀರಶೈವ ಬ್ರಾಹ್ಮಣ್ಯಕ್ಕೆ ಅಪ್ರಾಕೃತತ್ವದ ಮೂಲಕವಾಗಿ ಆ ಪರಶಿವನ ತಾಲು-ಓಷ್ಠ-ಪುಟ ವ್ಯಾಪಾರದಿಂದ, ಸ್ವತಃ ಪ್ರಮಾಣಭೂತ ಕಾಮಿಕಾದಿ ದಿವ್ಯಾಗಮೋಕ್ತವಾದ ಸ್ವಧರ್ಮಾನುಷ್ಠೇಯತ್ವ ಪ್ರತಿಪಾದಕ ಶಿವಾಗಮಗಳಿಗೆ ಅವಿರುದ್ಧವಾದ ಅಂಶವೆಂದು ತಿಳಿಯತಕ್ಕದ್ದು" ಎಂಬುದಾಗಿಯೂ ಕಂಠೋಕ್ತಿಯಿಂದಲೇ ನಿರೂಪಿಸಿರುವರು.

ಇದರಿಂದಲೂ ವೀರಶೈವರ ಅಪ್ರಾಕೃತ ವರ್ಣಾಶ್ರಮ ಧರ್ಮದಲ್ಲಿ "ಅಪ್ರಾಕೃತ ಬ್ರಾಹ್ಮಣ್ಯ"ವು ಅತ್ಯಂತ ಸ್ಪಷ್ಟವಾಗುತ್ತಿದೆಯೆಂಬುದು ನಿರ್ವಿವಾದವು

ಇತಿಹಾಸದಲ್ಲಿ ಇಂತಹ ಗೋತ್ರಗಳುಳ್ಳ ವೀರಶೈವ ಬ್ರಾಹ್ಮಣರ ಉದಾಹರಣೆಗಳು ಸಿಕ್ಕುತ್ತಿವೆ ‡ ಅಥರ್ವಣ ವೇದದ ಐಶ್ವರ್ಯ ಶಾಖೆಯಲ್ಲಿ—

"ಯೋವಾಮ ಹಸ್ತಾರ್ಚಿತಲಿಂಗಮೇಕಂ ಪರಾತ್ಪರಂ
ಧಾರಯತೇ ಸತತಂ ವಿಪ್ರಃ ಕ್ಷತ್ರಿಯೋವಾ"

ಇತ್ಯಾದಿ ಶ್ರುತಿಗಳಲ್ಲಿ— ಅಪ್ರಾಕೃತ ಬ್ರಾಹ್ಮಣ ಪರ್ಯಾಯವಾದ 'ವಿಪ್ರ' ಶಬ್ದವು ಪ್ರತಿಪಾದಿತವಾಗಿದೆ

---

‡ ಶ್ರೀಕರಭಾಷ್ಯದ ಪುಟ ೯ ರಿಂದ

ಸಾಯುಜ್ಯಂಗೀಷೀಯ ಶಾಖಾಯಾಂ । ಸದಾನಂದೋಪನಿಷದಿ ॥
ಅಂತರ್ಧಾರಯಿತುಂ ಶಕ್ತೋಽಪ್ಯಶಕ್ತೋವಾ ದ್ವಿಜೋತ್ತಮಃ ॥
ಸಂಸ್ಕೃತ್ಯ ಗುರುಣಾದತ್ತಂ ಶೈವಲಿಂಗಮುರಸ್ಥಲೇ ॥
ಧಾರ್ಯಂವಿಪ್ರೇಣ ಮುಕ್ತ್ಯೈರ್ಧಮೇವಂ ವೇದಾಂತವಿದೋ ವದಂತಿ

ಇಂತೆಂದು "ಸದಾನಂದೋಪನಿಷತ್ತಿ" ನಲ್ಲಿ ಅಪ್ರಾಕೃತ ಬ್ರಾಹ್ಮಣಾಪರ ಪರ್ಯಾಯವಾದ 'ವಿಪ್ರ'ಪದವು ಉಲ್ಲಿಖಿತವಾದುದಲ್ಲದೆ, 'ದ್ವಿಜೋತ್ತಮ' ಪದದಿಂದ ಬ್ರಾಹ್ಮಣಾದಿ ವರ್ಣಗಳೂ ಉಲ್ಲಿಖಿತರಾಗಿದ್ದಾರೆ "ಬ್ರಾಹ್ಮಣೋವೈ ಬ್ರಾಹ್ಮಣಮುಪಧಾವತಿಯೆಂಬ ಶೃತಿಯಲ್ಲಿ 'ಬ್ರಾಹ್ಮಣ' ಪದವು ಸ್ಪಷ್ಟೋಲ್ಲಿಖಿತವಾಗಿದೆ ಇದು ವೇದಕಾಲ ಮತ್ತು ಉಪನಿಷತ್ಕಾಲದ ಸಮಾಚಾರವಾಯಿತು, ಇನ್ನು ಸ್ಮೃತಿಕಾಲದ ಬಗ್ಗೆ—

'ಮುಖೇಮಂತ್ರೋ' ಎಂದಾರಂಭಿಸಿ 'ಇತಿ ಬ್ರಾಹ್ಮಣ ಲಕ್ಷಣಂ' ಎಂದು 'ಗೌತಮಸ್ಮೃತಿ' ಯಲ್ಲಿ ವೀರಶೈವ ಬ್ರಾಹ್ಮಣ್ಯದ ಬಗ್ಗೆ ಸ್ಪಷ್ಟೀಕರಿಸುವುದು ಸ್ಮೃತಿಕಾಲದ ಮಾತಾಗಿದೆ

ಕಲಕತ್ತಾ ನಗರನಿವಾಸಿ ಪ್ರತಾಪಚಂದ್ರರಾಯ ಮಹೋದಯರಿಂದ ಕ್ರಿ ಶ ೧೮೮೭ನೆಯ ಇಸ್ವಿಯಲ್ಲಿ ಮುದ್ರಿಸಲ್ಪಟ್ಟ 'ಮಹಾಭಾರತ' ದ ಅನುಶಾಸನ ಪರ್ವದ ೨೨ನೆಯ ಅಧ್ಯಾಯದ ೧ ನೆಯ ಶ್ಲೋಕದಲ್ಲಿ—

ಬ್ರಾಹ್ಮಣಂ ಲಿಂಗಿನಂಚೈವ ಬ್ರಾಹ್ಮಣಂ ವಾಪ್ಯಲಿಂಗಿನಂ ॥

ಎಂದು ವೀರಶೈವ ಬ್ರಾಹ್ಮಣ ಪದದ ಉಲ್ಲೇಖವಿರುವದು ಇದು ಕ್ರಿ ಪೂ ೩ನೆಯ ಶತಕದ ವಿಷಯವಾಯ್ತು

ಕಾಂಚೀ ನಗರನಿವಾಸಿ ಪೂವ್ವಾಡ ವೆಂಕಟರಾಯ ಮಹೋದಯರಿಂದ ಕ್ರಿ ಶ ೧೮೭೯ನೆಯ ಇಸ್ವಿಯಲ್ಲಿ ಅಚ್ಚುಗೊಳಿಸಿದ 'ಲಿಂಗಪುರಾಣ' ದ ಉತ್ತರ ಭಾಗದ ೨೧ ನೆಯ ಅಧ್ಯಾಯದ ೯೬ನೆಯ ಶ್ಲೋಕದಲ್ಲಿ—

"ಬ್ರಾಹ್ಮಣಸ್ಯ ಸಮಖ್ಯಾತಂ ಲಿಂಗಧಾರಣಮುತ್ತಮಂ ॥",

ಎಂಬುದಾಗಿ ವೀರಶೈವ ಬ್ರಾಹ್ಮಣ ಪದದ ಉಲ್ಲೇಖವಿದೆ ಇದು ಪುರಾಣ ಕಾಲದ ಮಾತಾಯಿತು

ಅರ್ವಾಚೀನ ಕಾಲದ್ದು ಯಾವದೋ, **ತೆಲಗಿನಲ್ಲಿ** "ಕವಿರಾಜ ಶಿಖಾಮಣಿ ತೆಂಕಣಾಮಾತ್ಯ" ನೆಂದು ಬಿರುದು ಪಡೆದ ಕವಿ "ನನಿ ಚೋಡ" ನು "ಕುಮಾರಸಂಭವ" ವೆಂಬ ತೆಲಗು ಕಾವ್ಯವನ್ನು ಬರೆದು, ತನ್ನ ಗುರುವಾದ ಶ್ರೀಶೈಲ ಜಗದ್ಗುರು ಮಲ್ಲಿಕಾರ್ಜುನ ಸ್ವಾಮಿಗಳ ಪಾದಂಗಳಿಗೆ ಸಮರ್ಪಿಸಿರುವನು ಇವನ ಕಾಲಗಣನೆಯ ಬಗ್ಗೆ ೧೨ನೇ ಶತಮಾನವೆಂದೂ, ೧೦ನೇ ಶತಮಾನವೆಂದೂ ಮತಭೇದವಿದೆ ಇವನು ವೀರಶೈವ ಕವಿಯು ರಾಜಮಹೇಂದ್ರ ನಿವಾಸಿಗಳಾದ ಶ್ರೀ ಎಂ ರಾಮಕೃಷ್ಣ ಕವಿ ಎಂ ಎ, ಎಂಬವರು ಈತನ ಮೇಲ್ಕಂಡ "ಕುಮಾರ ಸಂಭವ" ಕಾವ್ಯವನ್ನು ಮುದ್ರಿಸಿರುವರು ಈ ಕಾವ್ಯದ ೧೨ ನೆಯ ಸರ್ಗದ ೧೦೦೭ ನೆಯ ಪದ್ಯದಲ್ಲಿ ಮೇಲ್ಕಂಡ ತನ್ನ ಗುರುವನ್ನು ಬಣ್ಣಿ ಸುವಾಗೆ—

"ಧನ್ಯುಂಡು ಬ್ರಹ್ಮಕುಲೋತ್ತ್ರಂ ಸುಡು"

ಧನ್ಯನೂ, "ಬ್ರಾಹ್ಮಣ ಕುಲೋತ್ತಂಸ" ನೂ ಎಂದು ಬರೆದುಕೊಂಡಿದ್ದಾನೆ **ಸಂಸ್ಕೃತದಲ್ಲಿ—** ಪ್ರಭುಲಿಂಗಲೀಲೆಯ ೨೪ನೆಯ ಅಧ್ಯಾಯದ ೧೧೪ ನೇ ಶ್ಲೋಕದಲ್ಲಿ—

ಯೋಬ್ರಾಹ್ಮಣಃಸ್ಯಾದ್ವಿಮಲಃ ಪ್ರಕೃತ್ಯಾ |
ಸಏವ ಶಾಸ್ತ್ರೇಷ್ವಿಹ ಜಂಗಮಃಸ್ಯಾತ್ ||

ಎಂಬುದಾಗಿ ಬ್ರಾಹ್ಮಣ ಪದವು ಉಲ್ಲೇಖಿಸಲ್ಪಟ್ಟಿದೆ

**ಸಂಸ್ಕೃತ ಶಿಲಾಲಿಪಿಯಲ್ಲಿ—** § ಬೆಜವಾಡದ ಇಂದ್ರಕೀಲ ಪರ್ವತದ ಮೇಲಿರುವ ಕನಕದುರ್ಗ ಮಂಟಪದ ಕಂಬದಲ್ಲಿ ಒಂದು ಶಾಸನವು ಕೆತ್ತ ಲ್ಪಟ್ಟಿದ್ದು, ಮದ್ರಾಸ ಗವ್ಹರ್ನಮೆಂಟಿನವರು ಮುದ್ರಿಸಿರುವ "ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ" ೪ನೇ ಭಾಗದ ೨೪೯ ನೇ ಪುಟದಲ್ಲಿ ಪ್ರಕಟಿಸಲ್ಪಟ್ಟಿರುವದು (A R No 308 of 1892) ಆ ಶಾಸನ ದಲ್ಲಿ ಕಪಿಲೇಶ್ವರನೆಂಬ ರಾಜನು ಒಂದು ನೂರು ಜನ (ಜಂಗಮ)

---

§ ಪ್ರಾ. ಪುಟ ೧೬೭ ರಿಂದ

ಬ್ರಾಹ್ಮಣರ ಭೋಜನಕ್ಕಾಗಿ ಲಂಕಪಲ್ಲಿ ಮತ್ತು ವಾನರ ಎಂಬ ಎರಡು ಗ್ರಾಮಗಳನ್ನು ದಾನಮಾಡಿದನೆಂದು ಉಲ್ಲೇಖಿಸಲ್ಪಟ್ಟಿದೆ ಆ ಶಾಸನ ದಲ್ಲಿರುವ ಶ್ಲೋಕವು ಈ ಕೆಳಗೆ ಉದಾಹರಿಸಲ್ಪಟ್ಟಿದೆ

ತತಃಕ್ಷೇತ್ರೇ ಬ್ರಾಹ್ಮಣಾಖ್ಯ ಜಂಗಮಂ ಶತಸಮ್ಮಿತಂ ||
ಭೋಜನಾರ್ಥಂ ಲಂಕಪಲ್ಲಿ ವಾರ್ನರಂಚ ನಿಯೋಜಿತಂ ||

**ಕನ್ನಡದಲ್ಲಿ—** ಬ್ರಾಹ್ಮಣರ ಬಗ್ಗೆ ಉದಾಹರಣೆಯೆಂದರೆ— ಕ್ರಿ ಶತಕ ೧೧೬೦ರಲ್ಲಿದ್ದ, ಕೆರೆಯ ಪದ್ಮರಸನು ವೀರಶೈವ ಬ್ರಾಹ್ಮಣನಿದ್ದ ಬಗ್ಗೆ ಚನ್ನಬಸವಪುರಾಣದ ಕಾಲಜ್ಞಾನಸಂಧಿ ೬೨ರಲ್ಲಿ—

"ಮತ್ತೆಕೇಳಲ್ಲಿ ಪದ್ಮರಸನೆನಿಸುವ" "ಬ್ರಾಹ್ಮಣೋತ್ತಮಂ" ವೀರ ಶೈವಾಚಾರ್ಯನಿರಲಲ್ಲಿ " ||೫೭|| ಎಂಬ ಪದ್ಯದಲ್ಲಿ— ಇವನು ಬ್ರಾಹ್ಮ ಣೋತ್ತಮನೂ, ವೀರಶೈವಾಚಾರ್ಯನೂ ಇದ್ದುದು, ಸ್ಪಷ್ಟವಾಗುತ್ತಿದೆ

ಇನ್ನು ಗೋತ್ರದ ಬಗ್ಗೆ ಉದಾಹರಣೆ ಎಂದರೆ—

ಕ್ರಿ ಶತಕದ ೧೧೯೫ರಲ್ಲಿದ್ದ ಪಾಲಕುರ್ಕಿ ಸೋಮೇಶ್ವರನು, ಸುಪ್ರ- ಸಿದ್ಧ- ವೇಮನಾರಾಧ್ಯ ವಂಶೀಯನಿದ್ದುದು, ವಿಶ್ರುತವೇ ಇದೆ ಇವನು ತನ್ನಿಂದ ರಚಿಸಲ್ಪಟ್ಟ "ಅನುಭವಸಾರ"ವೆಂಬ ತೆಲಗುಗ್ರಂಥದಲ್ಲಿ—

" ಭೃಂಗಿರಿಟಿಗೋತ್ರುಡನು ಗುರು |
ಲಿಂಗತನೂಜುಂಡ ಶಿವಕುಲೀನುಡು ದುರ್ವ್ಯಾ ||
ಸಂಗವಿವರ್ಜಿತಚರಿತುಡು |
ಜಂಗಮಲಿಂಗಪ್ರಸಾದ ಸತ್ಪ್ರಾಣುಂಡನ್ನ || " ಎಂಬ ಕಂದ ಪದ್ಯ ದಿಂದ ತಾನು ಗುರುಲಿಂಗತನುಜನೆಂದೂ, ತನ್ನಗೋತ್ರ ಭೃಂಗಿಗೋತ್ರ- ವೆಂದೂ ಸ್ಪಷ್ಟಪಡಿಸಿರುವನು

ಅದುಕಾರಣ ಮೇಲ್ಕಂಡ ಶ್ರೀಮರಿತೋಂಟದಾರ್ಯರ ಕಂಠೋಕ್ತಿಯು ಅತ್ಯಂತ ಸಾಧುವಾಗಿದೆ

ಇನ್ನು, ಪಾಲಕುರ್ಕೆ ಸೋಮೇಶ್ವರನು ಬಸವಮಹಾನುಭಾವನ " ಪುರಾಣ"ವನ್ನು ತೆಲಗಿನಲ್ಲಿ ಬರೆದು, ವೀರಶೈವವು, "ಶಾಕ್ತೀಕ" ಮತವೆಂಬುದನ್ನು ಐತಿಹಾಸಿಕವಾಗಿ, ತೊಳಗಿಬೆಳಗಿದನು ಅಂತೇಯೇ ತನ್ನ "ಆದರ್ಶಜೀವನ"ವನ್ನು ಜಗತ್ತಿಗೆಲ್ಲ ತೋರ್ಪಡಿಸಿದನು ಆದುದರಿಂದಲೇ ನಿರಾಭಾರಿಚರವರ ಮರಿತೋಂಟದಾರ್ಯರಿಂದ "ಪುರಾಣಗಣ್ಯ" ಪುಣ್ಯ-ಪುರುಷನೆಂದು, ಬಣ್ಣಿಸಲ್ಪಟ್ಟನು.

ಇಂತೀ ವಿವೇಚನೆಯಿಂದ ಪ್ರಥಮಜರೂ, ಪ್ರಮಥರೂ, ಆಚಾರ್ಯ ಸಂಪ್ರದಾಯ ಪರಂಪರಾಗತ ಗೋತ್ರವಿಶಿಷ್ಟರೂ, ಬ್ರಾಹ್ಮಣಾದಿವರ್ಣಾ-ಶ್ರಮಯುಕ್ತರೂ ಆದ ಅಪ್ರಾಕೃತ ದ್ವಿಜಪದವಾಚ್ಯರಾದ ವೀರಶೈವರೇ ಶ್ರೌತಪದಾಭಿಧಾನವುಳ್ಳವರೆಂದು ನಿರ್ಧರಿಸಲಕ್ಕುಂ ಅಂತುಮಲ್ಲದೆಯಾತ್ರೈವರ್ಣಿಕರಾದ ಶ್ರೌತರಿಗೆ ಉಕ್ತವಾದ ಆ ಆ ಬ್ರಾಹ್ಮಣಾದಿ ವರ್ಣಧರ್ಮವೆ ಮೊದಲಾದವನ್ನು ಆತ್ಮೀಯ ಸಂಸ್ಕೃತಿಯಿಂದಲೇ ಗುರುತಿಸಬೇಕಲ್ಲದೆ ಸಂಕೀರ್ಣಮಹುದಾಗಿ, ಅನ್ಯರಿಂದರಿಯಬಾರದೆಂಬುದೇ ಮಥಿತಾರ್ಥ-ವಕ್ಕುಂ ಅದುಕಾರಣ 'ಶ್ರೌತ' ವಿಚಾರವು ಸಾಂಸ್ಕೃತಿಕಮೂಲವೆಂದೇನಿ-ರ್ಧರಿಸಲಕ್ಕುಂ

## ವೀರಶೈವದಲ್ಲಿ ವರ್ಣಾಶ್ರಮಧರ್ಮವು ಹೇಗೆ ಬಂದಿತು?

" ಪ್ರಥಮದಲ್ಲಿ ಪರಮೇಶ್ವರನು ಸೃಷ್ಟಿಯನ್ನು ಮಾಡುವಾಗ "ಯೋಬ್ರಹ್ಮಾಣಂ ವಿದಧಾತಿಪೂರ್ವಂ ಎಂಬಂತೆ ಬ್ರಹ್ಮನನ್ನು ಹುಟ್ಟಿಸಿ ಅವನಿಗೆ ಸೃಷ್ಟಿಯನ್ನು ಮಾಡಲಿಕ್ಕೆ ಆಜ್ಞಾಪಿಸಿದನು. ಅವನಿಗದುಬಾರದುದರಿಂದ ' ಸ್ವಾಮಿ ನನಗೆ ಸೃಜಿಸಲುಬಾರದು. ಅದುಕಾರಣ ತಾವು ಮೊದಲು ಸೃಷ್ಟಿಮಾಡಿ ತೋರಿಸಿದರೆ ಅದನ್ನುನೋಡಿ ಸೃಷ್ಟಿಗೈಯುವೆನು' ಎಂದು ವಿಜ್ಞಾಪಿಸಿಗೊಳ್ಳಲು ಆಗಲಾಪ್ರಭುವು—

" ಸಸರ್ಜಾತ್ಮಸಮಪ್ರಖ್ಯಾನ್ ಸರ್ವಜ್ಞಾನ್ ಸರ್ವಶಕ್ತಿಕಾನ್॥
ಪ್ರಬೋಧ ಪರಮಾನಂದ ಪರಿವಾಹಿತಮಾನಸಾನ್ ॥

ಪ್ರಮಥಾನ್ ವಿಶ್ವನಿರ್ಮಾಣಪ್ರಲಯಾದಿ ವಿಧಿಕ್ಷಮಾನ್ ||
ಸೃಷ್ಟ್ವಾ ಪ್ರಮಥವರ್ಗೇಷು "ವರ್ಣಾಶ್ರಮ" ಪರಿಕ್ರಮಾನ್ ||
ಅಪ್ರಾಕೃತ ಸದಾಚಾರಾನು ಪಾಧಿಶದಥಪ್ರಭುಃ ||
ತಸ್ಮಾತ್ತದ್ಗೋತ್ರಜಾಃ ಸರ್ವೇಶಿವಭಕ್ತ್ಯಾಧೃತವ್ರತಾಃ ||
(ಸುಪ್ರಭೇದಾಗಮ ಪ್ರಮಾಣ)

ತನ್ನಂತೆ ಪ್ರಖ್ಯಾತರೂ ಸರ್ವಜ್ಞರೂ ಸರ್ವಶಕ್ತಿಯುಳ್ಳವರೂ ವಿಶ್ವನಿರ್ಮಾಣ ಮತ್ತು ಪ್ರಳಯವಿಧಾನದಲ್ಲಿ ಸಮರ್ಥರೂ ಜ್ಞಾನ ಮತ್ತು ಆನಂದಪೂರಿತ ಮನಸ್ಸುಳ್ಳವರೂ ಆದ ಪ್ರಮಥರನ್ನು ಹುಟ್ಟಿಸಿದನು. ಆ ಬಳಿಕ ಪ್ರಮಥವರ್ಗಗಳಲ್ಲಿ ಅಪ್ರಾಕೃತ ಸದಾಚಾರಾತ್ಮಕಗಳಾದ "ವರ್ಣಾಶ್ರಮ" ಪರಿಕ್ರಮಗಳನ್ನು ಉಪದೇಶಿಸಿದನು ಆದಕಾರಣ ಆ ಆ ಗೋತ್ರಜಾತ-ರಾದವರೆಲ್ಲ ಶಿವಭಕ್ತಿಯಿಂದ ಮಹಾವ್ರತರೂಪ ವೀರಶೈವವನ್ನು ಹೊಂದಿ-ದರು" ಎಂಬೀ ಶಿವೋಕ್ತಿಯು ೨೮ ಶಿವಾಗಮಮೂಂತರ್ಗತ 'ಸುಪ್ರಭೇದಾಗಮ'ದಿಂದ ಉದ್ಧರಿಸಲ್ಪಟ್ಟು ಶ್ರೀಮರಿತೋಂಟದಾರ್ಯರಿಂದ ತಮ್ಮ-'ವೀರಶೈವಾನಂದಚಂದ್ರಿಕೆ'ಯ ೪೪೭ನೆಯ ಪುಟದಲ್ಲುದಾಹರಿಸಲ್ಪಟ್ಟಿದೆ.

ಇದೇ ಅಭಿಪ್ರಾಯವು 'ವಿಜಯಾಗಮ' 'ಸದಾಚಾರಸಂಗ್ರಹ' 'ಸಿದ್ಧಾಂತ ಶಿಖಾಮಣಿ' ಮುಂತಾದ ಗ್ರಂಥಗಳಲ್ಲಿಯೂ ಕಂಡುಬರುತ್ತಿದೆ ಮತ್ತು "ಇದೇ ಅರ್ಥವು ಕೂರ್ಮಪುರಾಣ- ಆದಿತ್ಯಪುರಾಣ ಮೊದಲಾ-ದವುಗಳಲ್ಲಿ— 'ಪ್ರಜಾಃ ಸೃಜೇತಿಚಾದಿಷ್ಟೋ ಬ್ರಹ್ಮಣಾ ನೀಲಲೋಹಿತಃ' ಇತ್ಯಾದಿ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆಂದು" ಎನ್. ಆರ್. ಕರಿಬಸವ ಶಾಸ್ತ್ರಿಗಳು ಲೇಟ್ ಆಸ್ಥಾನ ವಿದ್ವಾನ್ ಇವರು ತಮ್ಮ 'ತಾತ್ಪರ್ಯದೀಪಿಕೆ' ಎಂಬ 'ಸಿದ್ಧಾಂತ ಶಿಖಾಮಣಿ' ಟಿಪ್ಪಣದಲ್ಲಿ ತೋರಿಸಿರುವರು

ಇದರ ಮೇಲೀವ ಬ್ರಹ್ಮನಿಗೆ ಸೃಷ್ಟಿಸಲುಬಾರದುದಕ್ಕೆ ಪರಶಿವ-ನಿಂದ ಪ್ರಥಮಜರಾದ ಪ್ರಮಥರ ಸೃಷ್ಟಿಯುಂಟಾಯಿತೆಂದೂ, ಆ ಬಳಿಕ ಅಪ್ರಾಕೃತ ವರ್ಣಾಶ್ರಮವು ಪರಿಕ್ರಮವಾಗಿ ಅವನಿಂದಲೇ ಉಪದಿಷ್ಟವಾಯಿತೆಂದೂ ತಿಳಿದುಬರುವುದರಿಂದ ವೀರಶೈವರು ಜಾಗತಿಕ- ಪ್ರಾಕೃತಿಕ

ಸೃಷ್ಟಿಗಿಂತ ಪೂರ್ವದವರಾದ ಕಾರಣ ಆದ್ಯರೂ, ಪ್ರಥಮಜರೂ, ಪ್ರಮಥರೂ ಅಪ್ರಾಕೃತವರ್ಣಾಶ್ರಮಿಗಳೂ ಎಂಬುದು ಸ್ಪಷ್ಟವಾಗುತ್ತಿದೆ ಅದು ಕಾರಣ ವೀರಶೈವದಲ್ಲಿ ಅಪ್ರಾಕೃತ ವರ್ಣಾಶ್ರಮ ಧರ್ಮವು ಹೇಗೆಬಂದಿತ ಎಂಬ ಪ್ರಶ್ನಕ್ಕುತ್ತರವು ಸಹಜವಾಗಿ ಶಿವೋಕ್ತಿಯಿಂದಲೇ ತಿಳಿಯಬರುತ್ತಿದೆ

## ಸ್ವತಂತ್ರ ಧರ್ಮವು ಸರ್ವಲೋಕೋಪಕಾರಕವು

ಮೇಲ್ಕಂಡ ಚಂದ್ರಜ್ಞಾನಾಗಮ ಪ್ರಮಾಣದಿಂದ ವರ್ಣಾಶ್ರಮ ಧರ್ಮಾಥ್ಯವು ಶ್ರೌತವು ಎಂದು ಹೇಳಿದ ಮೇರೆಗೆ ಇದುವರೆಗೂ ಯತ್ಕಿಂಚಿದ್ ವಿಮರ್ಶಿಸಿದುದಾಯ್ತು. ಇನ್ನು ಷಟ್‌ಸ್ಥಲಾತ್ಮಕವಾದಾ ಪರಶಿವ ತತ್ವವು ನಿಷ್ಕಲ-ಸಕಲವೆಂದು ದ್ವಿವಿಧವಾದುದರಿಂದಾ ಷಟ್‌ಸ್ಥಲಂಗಳು ದ್ವಿವಿಧಮಾಗಿ, ಅದರೋಳ್ ಪ್ರಾಣಲಿಂಗಿ–ಶರಣ–ಐಕ್ಯಸ್ಥಲಸಂಜ್ಞಿತರೂ ನಿಷ್ಕಲ ಶಿವತತ್ವಜ್ಞಾನನಿಷ್ಠರೂ ಆದ ವೀರಶೈವರಿಗೆ—

ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ||
ಶಿವೋ ಮಹೇಶ್ವರಶ್ಚೇತಿ ನಾತ್ಯಂತಮಿಹಭಿದ್ಯತೇ || ೧೯ ||
ಯಥಾತಥಾನಭಿದ್ಯಂತೇ ಶೈವಾ ಮಾಹೇಶ್ವರಾಅಪಿ ||

ಪರಶಿವತತ್ವಕ್ಕೆ "ಶಿವಶ್ಶೂಲೀ ಮಹೇಶ್ವರಃ" ಎಂದಮರಕೋಶ ಪ್ರಸಿದ್ಧಮಾಗಿ, ಶಿವ-ಮಹೇಶ್ವರನೆಂದು ಅಭಿಧಾನಗುಣ ಪಾರಮಾಲೆಯಲ್ಲಿ ಅತ್ಯಂತ ಭೇದವು ಹೇಗೆ ಇಲ್ಲವೋ ಹಾಗೆ ವೀರಶೈವರಿಗೂ, ವೀರಮಾಹೇಶ್ವರರಿಗೂ ಅತ್ಯಂತ ಭೇದವಿಲ್ಲ. (ಇದು ಸಿದ್ಧದಶೆಯಲ್ಲಿ ಶಿವತಾದಾತ್ಮ್ಯರೂಪ ಲಿಂಗಾಂಗ ಸಾಮರಸ್ಯವನೈಯ್ದಿ ಪರಶಿವಸ್ವರೂಪ ವಳವಟ್ಟ ಮುಕ್ತಾತ್ಮರ ವಿಷಯವಾಗಿದೆಯೆಂಬುದು ಭಾವವು ಆದರೆ ಸಾಧಕ ದಶೆಯಲ್ಲಿ—ಸಾಧನಾವಸ್ಥಾ ಸಹಿತ ಲಿಂಗಾಂಗ ಸಾಮರಸ್ಯವನ್ನಭ್ಯಸಿಸುವಾಗ) ವೀರಶೈವರಿಂದಲೂ, ವೀರಮಾಹೇಶ್ವರರಿಂದಲೂ ಕ್ರಮವಾಗಿ ಅಂತರ್ಯಜ್ಞವೂ, ಬಹಿರ್ಯಜ್ಞವೂ ಆಚರಿಸಲು ತಕ್ಕುದಾಗಿದೆ ಎಂಬೀ ರೇಣುಕ ಗುರುಗಳ ಅಪ್ಪಣೆಯ ಮೇರೆಗೆ— ಜ್ಞಾನಯೋಗದಲ್ಲಿ ಅಭಿರತಿಯುಂಟಾಗಿ

ಅಂತಪ್ಪ "ಜ್ಞಾನಯೋಗ" ಪದವಾಚ್ಯವಾದ ಸ್ವತಂತ್ರ ವೀರಶೈವವನ್ನು ಮೇಲ್ಕಂಡ ಚಂದ್ರಜ್ಞಾನಾಗಮವು "ತದೀಯ ಧರ್ಮರಹಿತಂ ಸ್ವತಂತ್ರ ಮಿತಿಕಥ್ಯತೇ" ಇತ್ಯಾದಿಯಾಗಿ ನಿರೂಪಿಸುತ್ತಿದೆ ಅದುಕಾರಣವಿಲ್ಲಿ ಆ "ಸ್ವತಂತ್ರ" ವೀರಶೈವವನ್ನು ಯಥಾಮತಿಯಾಗಿ ವಿಮರ್ಶಿಸುವ

ಇಲ್ಲಿ—

**"ತದೀಯ ಧರ್ಮರಹಿತಂ ಸ್ವತಂತ್ರಮಿತಿ ಕಥ್ಯತೇ"**

ಎಂಬಂತೆ "ಸ್ವತಂತ್ರ" ವೆಂಬುದು ತದೀಯ ಧರ್ಮರಹಿತವೆಂದರೆ ವರ್ಣಗಳಾಗಲಿ, ಆಶ್ರಮಗಳಾಗಲಿ ಯಾವದೇ ತೆರನಾದ "ಜಾತಿ" ಯನ್ನವಲಂಬಿಸದೆ ಇದ್ದುದು ಎಂದರ್ಥವಾಗುತ್ತಿದೆ ಕುಲ, ಜಾತಿ, ವರ್ಣಾಶ್ರಮಾದಿಗಳು "ಜನ್ಮ" ವನ್ನವಲಂಬಿಸಬೇಕಾದುದು ಸಹಜ ಏಕೆಂದರೆ "ಯತ್ಪಿಂಡೇಷ್ವನುವರ್ತೇತ ಸಾಜಾತಿರಭಿಧೀಯತೆ" ಎಂಬುದು ಪ್ರಸಿದ್ಧವು ತದ್ರಹಿತವಾದ "ಸ್ವತಂತ್ರ" ಧರ್ಮವು ಕುಲ, ಜಾತಿ, ವರ್ಣ ಮೊದಲಾದ ಯಾವ ಜನ್ಮ (ಹುಟ್ಟು) ವನ್ನೂ ಅವಲಂಬಿಸಬೇಕಾಗಿಲ್ಲ. ಪರಂತು ಭಕ್ತಿಯನ್ನು ಮಾತ್ರ ಅವಲಂಬಿಸಬೇಕಾಗುತ್ತದೆ ಈ ಬಗ್ಗೆ ಪಾರಮೇಶ್ವರಾಗಮವು—

ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ ||
ಭಕ್ತಮಾತ್ರ ಪವಿತ್ರಾಹಿಸರ್ವ ಏವಾಧಿಕಾರಿಣಃ ||

—ಪ. ೧೨ ಶ್ಲೋಕ ೬೨

ವೀರಶೈವ ಮತವನ್ನಾಶ್ರಯಿಸುವಲ್ಲಿ ಜಾತಿ-ವರ್ಣಾಶ್ರಮಾದಿಗಳ ತೊಡಕಿಲ್ಲದೆ, ಯಾವನಿಗೆ ಭಕ್ತಿಯುಂಟಾಗುತ್ತಿದೆಯೋ ಅಂತಹ ಭಕ್ತಿಯುಕ್ತನು ಮಾತ್ರ ಅಧಿಕಾರಿಯು. ಭಕ್ತಿ ಮಾತ್ರ ಪವಿತ್ರರಾದವರೆಲ್ಲರೂ ಅಧಿಕಾರಿಗಳು ಎಂದು ಘಂಟಾಘೋಷಗೊಳಿಸುತ್ತಿದೆ ಮತ್ತು—

ನಸ್ತ್ರೀಭೇದೋ ನಪುಂಭೇದೋ ಜಾತಿವರ್ಣಾಶ್ರಮಾದಿಕಂ ||
ಸರ್ವಾತೀತಮಿದಂ ವಿದ್ಧಿ ವೀರಶೈವಮತಂ ಮಮ ||

—ಪಾ. ಪ ೫ ಶ್ಲೋ. ೪೧

ಸ್ತ್ರೀಭೇದವಿಲ್ಲ, ಪುರುಷ ಭೇದವಿಲ್ಲ "ಜನ್ಮ" ವನ್ನವಲಂಬಿಸಿ ಹೊರಹೊರಟ ಜಾತಿ–ವರ್ಣ–ಆಶ್ರಮ ಮೊದಲಾದ ಆದೆಲ್ಲವನ್ನೂ ಮೀರಿದುದು ಈ ನನ್ನ ವೀರಶೈವ ಮತವು ಎಂದು ಪಾರ್ವತಿಗೆ ಪರಮೇಶ್ವರನು ಉತ್ತರವಿತ್ತನು ಎಂದೂ ತಿಳಿಯುತ್ತಿದೆ

ಕೈವಲ್ಯೋಪನಿಷತ್ ಸಾದಾ ಶಿವಭಾಷ್ಯದ "ಭಾವಪ್ರಕಾಶ" ದ ೧೦೦ ನೇ ಪುಟದಲ್ಲಿ—

" **ವೀರಶೈವ ವಿಶ್ವಧರ್ಮ–** ಆದ್ದರಿಂದಲೇ ಯಾರು ಬೇಕಾದರೂ ಈ ಧರ್ಮದಲ್ಲಿ ಸೇರಿ ಮುಕ್ತರಾಗಬಹುದೆಂಬುದಕ್ಕೆ ಅನೇಕ ಪ್ರಮಾಣ ಗಳಿವೆ ಬ್ರಾಹ್ಮಣಾದಿ ಪ್ರಾಕೃತ ವರ್ಣಾಶ್ರಮ ಧರ್ಮದವರೊ ಕೂಡ ಷಟ್‌ಸ್ಥಲ ಬ್ರಹ್ಮನಿಷ್ಠನಾದ ಸದ್ಗುರುವನ್ನು ಹೊಂದಿ ೩–೬–೯–೧೨ ವರ್ಷ ಅಥವಾ ಗುರುಕಟಾಕ್ಷ ಆಗುವವರೆಗೆ ಸೇವೆಗೈದು ಶಿವದೀಕ್ಷಾ ಸಂಸ್ಕಾರದ ಮೂಲಕ ಮಹಾಪಾಶುಪತ ವ್ರತನಿಷ್ಠ ಅತಿವರ್ಣಾಶ್ರಮ ಧರ್ಮಿಗಳಾಗಿ ಮುಕ್ತರಾಗಲು ವೀರಶೈವ ಮತವು ಅವಕಾಶವಿತ್ತಿದೆ ಇದರಿಂದ ವೀರಶೈವ ಮತವು ಸರ್ವಜನ ಶ್ರೇಯಃಪದ "ವಿಶ್ವಮತ"ವೆಂದು ಬೇರೆ ಹೇಳಬೇಕಾಗಿಲ್ಲ ಆದುದರಿಂದಲೇ—

ವರ್ಷತ್ರಯಂ ಬ್ರಾಹ್ಮಣಂತು ಕ್ಷತ್ರಿಯಂವರ್ಷ ಷಟ್ಕಂಚ ||
ನವವರ್ಷಾತ್ ಪರಂವೈಶ್ಯಂ ಶೂದ್ರಂ ದ್ವಾದಶವರ್ಷಕಂ ||
ಪರೀಕ್ಷ್ಯ ಬಹುಧಾಸಮ್ಯಕ್ ದೀಕ್ಷಯಾ ಯೋಜಯೇದ್ಗುರುಃ ||
—ವೀರಶೈವಾಚಾರಕೌಸ್ತುಭ ಪುಟ ೧೬೭

"ಶ್ರೀಗುರುವಾದಾತನು ಸಕಲಮಂಗಳ ಹೃದಯವನರಿದು, ತನ್ನ ಆದಿಮಧ್ಯಾವ ಸಾನಮಂ ತಿಳಿದು, ಸರ್ವಾಚಾರವು ತನ್ನಲ್ಲಿ ನೆಲೆಗೊಂಡು ಬ್ರಾಹ್ಮಣನಂ ಮೂರು ವರ್ಷನೋಡಬೇಕು ಕ್ಷತ್ರಿಯನಂ ಆರು ವರ್ಷ-ನೋಡಬೇಕು ವೈಶ್ಯನಂ ಒಂಭತ್ತು ವರ್ಷ ನೋಡಬೇಕು. ಶೂದ್ರನು ಹನ್ನೆರಡು ವರ್ಷ ನೋಡಬೇಕು ಅದೆಂತೆಂದೊಡೆ

ವೀರಾಗಮೆ—

ಬ್ರಾಹ್ಮಣಂ ತ್ರೀಣಿವರ್ಷಾಣಿ ಕ್ಷತ್ರಿಯಂ ವರ್ಷಷಟ್ಸ್ವಚ ||
ವೈಶ್ಯಂತು ನವವರ್ಷಾಣಿ ಶೂದ್ರಂದ್ವಾದಶ ವರ್ಷಕಂ ||

ಇಂತೀ ಶ್ರುತ್ಯರ್ಥವನರಿಯದೆ ಉಪಾಧಿವಿಡಿದು ಉಪದೇಶವಂ ಮಾಡಿದಾತ ಗುರುವಲ್ಲ ಉಪದೇಶವಿಡಿದು ಉಪಾಧಿಯಲ್ಲಿ ದೀಕ್ಷೆಯಕೊಂಬಾತ ಶಿಷ್ಯ-ನಲ್ಲ ಇವರಿಬ್ಬರನಿಲವು ಒಂದೇ, ರಕ್ಕನಮನೆಗೆ ರಕ್ಕಬಂದಂತೆ, ಆ ಗುರು ಶಿಷ್ಯರಿಬ್ಬರನ್ನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲ ಚನ್ನಸಂಗಮ-ದೇವರು" ಎಂದು ಹೇಳಿದೆ

ಮತ್ತು ಕಾರಣಾಗಮವು—

" ಬ್ರಾಹ್ಮಣಃ ಕ್ಷತ್ರಿಯೋವಾಥ ವೈಶ್ಯಶ್ಶೂದ್ರೋಂತ್ಯಜೋಪಿವಾ||
ಪುಮಾನ್ನಾರ್ಯಥವಾಕ್ಲೀಬಃ ಸರ್ವೇಮೋಕ್ಷಾಧಿ ಕಾರಿಣಃ ||
ಮದನುಗ್ರಹ ಪಾತ್ರೋಯಃ ಸರ್ವೋಮೋಕ್ಷಾಯ ಕಲ್ಪತೇ ||

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಂತ್ಯಜರೇ ಆಗಲಿ ಪುರುಷನಾಗಲಿ ನಾರಿಯಾಗಲಿ ನಪುಂಸಕನಾಗಲಿ ಸರ್ವರೂ ಮೋಕ್ಷಾಧಿಕಾರಿಗಳಾಗುತ್ತಾರೆ ನನ್ನ ಅನುಗ್ರಹ ಪಾತ್ರವಾದ ಎಲ್ಲ ಜನವೂ ಮೋಕ್ಷಕ್ಕೆ ಸಮರ್ಥವಿದೆ " ಎಂದು ಉದ್ಘೋಷಿಸಿದೆ

ಸೂಕ್ಷ್ಮತಂತ್ರದ ಮೂರನೆಯ ಪಟಲದಲ್ಲಿ—

ನಾನಾವಿಧಾನಿ ಕಾಷ್ಠಾನಿ ವಹ್ನಿಯೋಗಾದ್ಯಥೈಕ ತಾಂ ||
ತಥಾನೇಕವಿಧಾಮರ್ತ್ಯಾ ಗುರುತಃ ಶಿವತಾಮಿಯುಃ ||

ನಾನಾಪ್ರಕಾರವಾದ ಕಟ್ಟಿಗೆಗಳು ಅಗ್ನಿ ಸಂಯೋಗದಿಂದ ಹೇಗೆ ಏಕತ್ವ-ವನ್ನು ಹೊಂದುವವೋ ಹಾಗೆ ಅನೇಕ ವಿಧವಾದ ಮಾನವರು ಗುರುವಿನ ದೆಸಯಿಂದ ಶಿವತ್ವವನೆಯ್ದುವರು " ಎಂದು ಹೇಳದೆ

ಇದರಿಂದ 'ಸ್ವತಂತ್ರ' ಧರ್ಮವು ವರ್ಣಾಶ್ರಮ ರಹಿತವಾದುದರಿಂದ ಶ್ರೌತರಿಗೆ ಪರಂಪರಾಮೂಲವೆನಿಸಿದ ಗೋತ್ರಗಳಿದ್ದಂತೆ ' ಸ್ವತಂತ್ರ 'ರಿಗೆ ಗುರುಹಸ್ತವೇ ಜನ್ಮ ಮೂಲವಾದುದರಿಂದ ಅಂತಹ ಸಂಪ್ರದಾಯಾಗತ

ಗೋತ್ರವೆಂದರೆ 'ಶಿವಗೋತ್ರ' ವೆನಬೇಕಾಗುತ್ತಿದೆ  ಈ ಬಗ್ಗೆ ಸೂಕ್ಷ್ಮ-ತಂತ್ರದ ೭ನೆಯ ಪುಟದಲ್ಲಿ—

ಗೋತ್ರಂಚ ಶಿವಗೋತ್ರಂಚ ನಾಮಾಪಿ ಶಿವನಾಮಚ ||
ಸಮಾಶಿವೌಚಪಿತರೌ ಬಾಂಧವಾಃ ಶಿವಕಿಂಕರಾಃ ||

ಗೋತ್ರವು ಶಿವಗೋತ್ರವು ನಾಮವು ಶಿವನಾಮವು ಪಾರ್ವತೀ ಪರಮೇಶ್ವ-ರರು ತಂದೆತಾಯಿಗಳು ಶಿವಕಿಂಕರರು ಬಾಂಧವರು. ಎಂಬ ಶಿವವಚನವು ಪ್ರಮಾಣವಾಗಿದೆ

ವೀರಶೈವ ಮತಭಾಷ್ಯಕಾರಿಕೆಯಲ್ಲಿ—

ಸನತ್ಕುಮಾರ ಪ್ರಮುಖಾ ಜ್ಞಾನನಿಷ್ಠಾ ಯಶಸ್ವಿನಃ ||
ಧೃತಲಿಂಗಾಂಗಭಾವಾಶ್ಚ ವಿರಾಜಂತೇಽನಿಶಂ ಮುದಾ || ೧೧ ||
ಅಗಸ್ತ್ಯೋ ಜೈಮಿನಿಶ್ಚೈವ ವಿಶ್ವಾಮಿತ್ರೋಽಥ ಕಸ್ಯಪಃ ||
ಭರದ್ವಾಜೋಽಂಗಿರಾ ಅತ್ರಿರ್ವಸಿಷ್ಠೋ ರೋಮಹರ್ಷಣಃ ||೧೪||
ಏತೇ ಸರ್ವೇ ಮಹಾಭಾಗಾ ಅತಿವರ್ಣಾಶ್ರಮೇರತಾಃ ||
ವೀರಶೈವಾಃ ಸಮಾಖ್ಯಾತಾ ಜೀವನ್ಮುಕ್ತಾನ ಸಂಶಯಃ ||೧೫||

—ಕ್ರೆ ಸಾ ಉ. ೧

ಸನತ್ಕುಮಾರನೇ ಮೊದಲಾದ "ಜ್ಞಾನಯೋಗ" ನಿಷ್ಠರು ಯಾವಾಗಲೂ ಸಂತೋಷದಿಂದ ಧರಿಸಲ್ಪಟ್ಟ ಲಿಂಗಾಂಗ ಸಾಮರಸ್ಯಭಾವವುಳ್ಳವರಾಗಿ ವಿರಾಜಿಸುತ್ತಾರೆ ಅಗಸ್ತ್ಯ, ಜೈಮಿನಿ, ವಿಶ್ವಾಮಿತ್ರ, ಕಸ್ಯಪ, ಭರದ್ವಾಜ, ಅಂಗಿರ, ಅತ್ರಿ, ವಸಿಷ್ಠ, ರೋಮಹರ್ಷಣರೆಂಬ ಇವರೆಲ್ಲ ಮಹಾನುಭಾವರು ಅತಿವರ್ಣಾಶ್ರಮರತರಾಗಿ ಜೀವನ್ಮುಕ್ತರಾದ ವೀರಶೈವರೆಂದು ನಿಶ್ಶಂಕವಾಗಿ ಹೇಳಲ್ಪಟ್ಟರು ಎಂದು ಹೇಳಿದ

ಪೂಜ್ಯವಾದ ಶ್ರೀರೇಣುಕರು—

ಬ್ರಹ್ಮವಿಷ್ಣ್ವಾದಯೋದೇವಾ ಮುನಯೋ ಗೌತಮಾದಯಃ ||
ಧಾರಯಂತಿ ಸದಾಲಿಂಗ ಮುತ್ತಮಾಂಗೇ ವಿಶೇಷತಃ ||

—ಸಿ ಶಿ ಪ ೬ ಶ್ಲೋ ೩೪

ಗೌತಮನೇ ಮೊದಲಾದ ಮುನಿವರ್ಯರೂ, ಸತ್ಯಲೋಕ ವೈಕುಂಠ ಲೋಕಗಳ ಒಡೆಯರಾದ ಬ್ರಹ್ಮ, ವಿಷ್ಣುಗಳೇ ಮೊದಲಾದವರು ಉತ್ತ ಮಾಂಗದಲ್ಲಿ ವಿಶೇಷವಾಗಿ ಲಿಂಗವನ್ನು ಸದಾ ಧರಿಸುತ್ತಾರೆ ಎಂದು ಸಾರಿ ರುವರು

ಆದುಕಾರಣ "ಸ್ವತಂತ್ರ" ವೀರಶೈವವು ಸರ್ವಲೋಕೋಪಕಾರಕ ವಾದುದೆಂದೇ ನಿರ್ಧರಿಸಲಕ್ಕುಂ

## ಶಿವಾಗಮಗಳು ಶ್ರೌತ-ಸ್ವತಂತ್ರವೆಂದು ದ್ವಿವಿಧವಾದರೂ ವೈದಿಕವೇ

ಕಾಮಿಕಾದಿ ವಾತುಲಾಂತವಾದ ೨೮ ಶಿವಾಗಮಗಳು ಸಾಧಕರ ಯೋಗ್ಯತಾನುಸಾರವಾಗಿ ಧರ್ಮವನ್ನು ಪ್ರತಿಪಾದಿಸುವುವಾಗಿ ಅವುಗಳ ಲ್ಲಿಯೂ ಶ್ರೌತಾಗಮ ಸ್ವತಂತ್ರಾಗಮವೆಂಬ ದ್ವೈವಿಧ್ಯವು ತೋರಿಬರು ತ್ತಿದೆ ಹೇಗೆಂದರೆ—

ಶಿವಪುರಾಣ ಪೂರ್ವಭಾಗೆ ವಾಯವೀಯ ಸಂಹಿತೆಯ ೨೮ನೆಯ ಅಧ್ಯಾಯದಲ್ಲಿ—

ಶೈವಾಗಮೋಽಪಿದ್ವಿವಿಧಃ ಶ್ರೌತೋಽಶ್ರೌತಶ್ಚ ಸಸ್ಮೃತಃ ||
ಶೃತಿಸಾರಮಯಃ ಶ್ರೌತಃ ಸ್ವತಂತ್ರ ಇತರೋಮತಃ || ೧೧ ||

—ಸೋಲಾಪುರ ಪ್ರತಿ

ಶೈವಾಗಮವಾದರೂ ಶ್ರೌತ-ಅಶ್ರೌತವೆಂದು ದ್ವಿವಿಧವಾಗಿದೆ ಶೃತಿಸಾರ ಮಯವಾದುದು ಶ್ರೌತವು ಇತರವಾದುದು ಅಶ್ರೌತ (ಸ್ವತಂತ್ರ) ವು ಎಂಬುದಾಗಿ ಹೇಳಿದೆ

ಜಗತ್ಪ್ರಸಿದ್ಧವಾದ 'ಶಿವಾಂಕ'ದಲ್ಲಿ ಶ್ರೀಯುತ ಚಿಂತಾಹರಣ ಚಕ್ರ-ವರ್ತಿ ಎಮ್ ಎ ಇವರು ತಮ್ಮ "ಶೈವಸಂಪ್ರದಾಯ" ಎಂಬ ಲೇಖದಲ್ಲಿ ಹೀಗೆ ಹೇಳಿದ್ದಾರೆ —

“ ಅಪ್ಪಯ್ಯದೀಕ್ಷಿತನೆ ಅಪನೀ ‘ಶಿವಾರ್ಕಮಣಿದೀಪಿಕಾ’ ನಾಮಕ ಬ್ರಹ್ಮಸೂತ್ರಕೀ ಟೀಕಾಮೇ ದೂಸರೇ ಅಧ್ಯಾಯಕ ದೂಸರೇ ಪಾದಕೆ ಅಡತೀಸವೆ ಸೂತ್ರಕೀ ವ್ಯಾಖ್ಯಾಮೆ ವಾಯುಸಂಹಿತಾನಾಮಕ ಏಕಗ್ರಂಥ ಕಾ ಉಲ್ಲೇಖ ಕಿಯಾಹೈ । ಉಸಮೆ ತಥಾ ವೈಸೇಹೀ ಕತಿಪಯ ದೂಸರೆ ಗ್ರಂಥೋಮೆ ಶೈವೊಂ ತಥಾ ಶೈವ ಗ್ರಂಥೊಂಕೆ ವೈದಿಕ ತಥಾ ಅವೈದಿಕ “ ಶೈವಾಗಮಮೋಽಪಿ ದ್ವಿವಿಧಃ ಶ್ರೌತೋ ಶ್ರೌತಶ್ಚ ಸಸ್ಮೃತಃ ” ಇಸ-ಪ್ರಕಾರ ದೋ ವಿಭಾಗ ಕಿಯಾಹೈ ”

ಇದರಿಂದಲೂ ಶ್ರೌತಅಶ್ರೌತ (ಸ್ವತಂತ್ರ)ವೆಂಬ ವಿಭಾಗವು ಆಗಮ ಗಳಲ್ಲಿದೆಯೆಂಬುದು ಸ್ಪಷ್ಟವಾಗುತ್ತಿದೆ

ವೀರಶೈವ ಧರ್ಮಶಿರೋಮಣಿಯ ೨ನೆಯ ಪರಿಚ್ಛೇದದಲ್ಲಿ-

† “ತಥಾಹಿ ತಂತ್ರಂ ದ್ವಿವಿಧಂ ವೈದಿಕ ಮವೈದಿಕಂಚೇತಿ” ತಂತ್ರರೂಪೀ ಶಿವಾಗಮವು ಎರಡು ತೆರನಾಗಿದೆ ಒಂದು ವೈದಿಕವು, ಇನ್ನೊಂದು ಅವೈದಿಕ (ಸ್ವತಂತ್ರ)ವು” ಎಂದು ಹೇಳಿದೆ

ವೀರಶೈವ ಭಾಷ್ಯಕಾರಿಕೆಯ ಉಪೋದ್ಘಾತದಲ್ಲಿ—

ಆಗಮಾದ್ವಿವಿಧಾಜ್ಞೇಯಾ ವೇದಾನಾಮ ವಿರೋಧಿನಃ ||೧೪||

ವಿರೋಧಿನಶ್ಚ . [ವೇದಗಳಿಗೆ ಅವಿರುದ್ಧವಾದುವು, ಮತ್ತು ವಿರುದ್ಧವಾದುವು. ಎಂಬುದಾಗಿ ಆಗಮಗಳು ದ್ವಿವಿಧವಾಗಿವೆ ]

ಇದರಿಂದ ಶಿವಾಗಮಗಳಲ್ಲಿ ಶ್ರೌತ-ಸ್ವಂತತ್ರವೆಂಬ ಪದಗಳಿಗೆ ಪರ್ಯಾಯ ವಾಚಕವಾದ ‘ವೇದಾವಿರೋಧಿ’ ಮತ್ತು ‘ವೇದವಿರೋಧಿ’ಎಂಬ ಪದಗಳೂ ಉಂಟೆಂಬುದು ವ್ಯಕ್ತವಾಗುತ್ತಿದೆ

ಇಲ್ಲಿ ‘ ವೇದವಿರೋಧಿ’ಎಂಬ ಪದವನ್ನು ಕೇಳಿದಕ್ಷಣವೇ ವೀರಶೈ-ವಾಗಮಗಳು ವೇದ-ವಿರುದ್ಧವಾದ ಕಾಪಾಲಾದ್ಯಾಗಮಗಳನ್ನು ಹೋಲಿಸಿ, ‘ಶ್ರುತಿಪಥಗಲಿತಾನಾಂ ಮಾನವಾನಾಂ ಹಿಂತಂತ್ರಂ’ ಎಂಬ ಸೂತಸಂಹಿ-ತಾದಿ ವಚನಗಳಂತೆ ಶ್ರುತಿಮಾರ್ಗ ಭ್ರಷ್ಟರಿಗೆ ತಂತ್ರವು ಎಂದು ಆಕ್ಷೇಪಿಸಿ

---

† ವೀ ಧ ಶಿ ಪು ೧೧೪.

ದರೆ- ಸಲ್ಲದು. ಅದೇನು ಕಾರಣವೆಂದರೆ— ಸೂತ-ಸಂಹಿತೆಯಲ್ಲಿಯೇ 'ಅಷ್ಟಾದಶಪುರಾಣಾನಾಂ ಕರ್ತಾಸತ್ಯವತೀಸುತಃ | ಕಾಮಿಕಾದಿ ಪ್ರಭೇದಾನಾಂ ಯಥಾದೇವೋ ಮಹೇಶ್ವರಃ' ಎಂಬುಕ್ತಿಯಿಂದಲೇ ಪುರಸ್ಕಾರವು ದೊರೆಯುತ್ತಿದ್ದು, ಶಿವಕೃತ ಆಗಮಗಳಲ್ಲಿ ವಿಶ್ವಸನೀಯತೆಯನ್ನು ಅವಿ-ಶೇಷವಾಗಿ ಪುರಾಣಗಳಿಗೆ ಹೋಲಿಸಿ ಮಾಧವಾಚಾರ್ಯರು ವೈದಿಕತೆಯನ್ನು ಪ್ರಸ್ಥಾಪಿಸಿರುವಾಗ, ಶಿವಾಗಮಗಳಿಗೆ 'ಕ್ವಚಿದಪಿದೋಷಶಂಕಾಕಲುಷರ-ಹಿತಾನಾಂ ಶೈವಾಗಮಾನಾಂ' ಒಂದೆಡೆಯಲ್ಲಿಯಾದರೂ ಇಂತಹ ಶಂಕೆ-ಗಳಂಟೆವು. ಎಂದು ಅಪ್ಪಯ್ಯ ದೀಕ್ಷಿತಾದಿಗಳ ಉಕ್ತಿಗಳಿಂದಲೇ ಈ ಹಿಂದೆ ಶಿವಾಗಮಗಳ ಪರಮಪ್ರಾಮಾಣ್ಯವು ಸಿದ್ಧಗೊಳಿಸಿದೆಯಷ್ಟೇ !

ಅದುಕಾರಣ ಕ್ರಿ. ಶ. ೧೧೬೦ ರಲ್ಲಿದ್ದ ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶ್ರೀಕರಭಾಷ್ಯದ ೪೪ನೆಯ ಪುಟದಲ್ಲಿ—

"ವೇದವೇದಾಂತೇಷು ದರ್ಶನಾತ್ ಪತಿ-ಪಾಶ-ಪಶುಪದಾರ್ಥತ್ರಯ
ಪ್ರತಿಪಾದಕ "ಶೈವಾಗಮಾ" ನಾಂ ವೈದಿಕತ್ವಂ ಘಂಟಾಘೋಷಃ|

ಎಂಬುದಾಗಿ "ಶೈವಾಗಮ" ಗಳಿಗೆ "ವೈದಿಕತ್ವ" ವು ಸಿದ್ಧವಾಗುವದು. ಘಂಟಾಘೋಷವಾಗಿದೆ"ಯೆಂದು ಅಪ್ಪಣೆಗೈದಿರುವರು.

ಆದುದರಿಂಥಲೇ ರೇಣುಕಪಾದರು—

ವೇದಧರ್ಮಾಭಿಧಾಯಿತ್ವಾತ್ ಸಿದ್ಧಾಂತಾಖ್ಯಃ ಶಿವಾಗಮಃ
ವೇದಬಾಹ್ಯ ವಿರೋಧಿತ್ವಾತ್ ವೇದಸಮ್ಮತ ಉಚ್ಯತೇ ||
(ಸಿ. ಶಿ. ಪ. ೫, ಶ್ಲೋಕ ೧೨)

ವೇದಧರ್ಮವನ್ನು ಹೇಳುವ ಕಾರಣದಿಂದಲೂ, ವೇದಬಾಹ್ಯವಾದ ಕರ್ಮಗಳಿಗೆ ವಿರೋಧಿಸುವದರಿಂದಲೂ ಸಿದ್ಧಾಂತಾಖ್ಯವಾದ "ಶಿವಾಗಮ" ವು ವೇದಸಮ್ಮತವೆಂದು ಹೇಳಲ್ಪಡುತ್ತಿದೆ ಎಂದು ಉಪದೇಶಿಸಿರುವರು. ಅದು ಕಾರಣ ಶ್ರೌತ-ಸ್ವತಂತ್ರವೆಂದು ದ್ವಿವಿಧವಾದರೂ ಶಿವಾಗಮಗಳು ವೈದಿಕವೆಂದೇ ನಿರ್ಣಯಿಸಲಕ್ಕುಂ

## ಶ್ರೌತ-ಸ್ವತಂತ್ರಾತ್ಮಕ ಶಿವಾಗಮಗಳ ಉದಾಹರಣೆ

ವೀರಶೈವವು ತಂತ್ರಗಳಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಲ್ಪಡುವವರಿಂದ "ತಾಂತ್ರಿಕ" ವೆಂಬುದು ಪ್ರಸಿದ್ಧವಷ್ಟೇ. ಇದು ಶ್ರೌತ-ಸ್ವತಂತ್ರಾತ್ಮಕ ವಾಗಿ ವಿಭಾಗ ಪುರಸ್ಸರ ನಿರೂಪಿಸಲ್ಪಡುವಾಗ ಇತ್ತೆರನಾದುದು ಇದನ್ನೇ ಪರ್ಯಾಯದಿಂದ ವೀರಶೈವ ಮತಭಾಷ್ಯಕಾರಿಕೆಯು—

**ತಾಂತ್ರಿಕಂ ದ್ವಿವಿಧಂ ವೇದವಿಹಿತಂ ತದ್ವಿರುದ್ಧಕಂ ॥ ೩೦೫ ॥**
(ಉಪದೇಶ ೪)

ತಾಂತ್ರಿಕವಾದೀ ವೀರಶೈವವು ವೇದವಿಹಿತವೂ ವೇವವಿರುದ್ಧವೂ ಎಂದು ಎರಡು ಬಗೆಯಾಗಿದೆ ಎಂದು ನಿರೂಪಿಸುತ್ತಿದೆ.

ಇಂತು ಶ್ರೌತ-ಸ್ವತಂತ್ರರೂಪ ವೀರಶೈವವನ್ನೇ ಪರ್ಯಾಯದಿಂದ ವೇದವಿಹಿತ ವೇದವಿರುದ್ಧರೂಪವಾಗಿ ಪ್ರತಿಪಾದಿಸುವ ಆಗಮಗಳ ಉದಾಹರಣೆಯು ಸೂಕ್ಷ್ಮಾಗಮದ ೩ನೆಯ ಪಟಲದಲ್ಲಿ—

ಮದೇಕಶರಣಾಯೇಚ ಮದಾರಾಧನ ತತ್ಪರಾಃ ॥೨೨॥
ಅಪಿವೇದವಿರುದ್ಧಾಶ್ಚ ತವಾತ್ರಾಧಿಕಾರಿಣಃ ॥
ವೈದಿಕಾಅಪ್ಯಭಕ್ತಾಶ್ಚೇದನ್ಯ ದೇವಾರ್ಚನಾಪರಾಃ ॥೨೩॥
ಅನ್ಯಲಾಂಛನ ಯುಕ್ತಾಶ್ಚ ತೇತುನಾತ್ರಾಧಿಕಾರಿಣಃ ॥

ನನ್ನನ್ನೆ ಏಕ ರಕ್ಷಕನನ್ನಾಗಿ ಬಗೆದು, ನನ್ನ ಆರಾಧನೆಯಲ್ಲಿ ತತ್ಪರರಾದರೆ, ವೇದ ವಿರುದ್ಧರೂಕೂಡ ಈ ಮಹಾ ಮನ್ತ್ರೋಪದೇಶಕ್ಕೆ ಅಧಿಕಾರಿಗಳು. ಗುತ್ತಾರೆ, ವೈದಿಕರಾದರೂ, ಭಕ್ತಿ ಶೂನ್ಯರಾಗಿ ಅನ್ಯದೇವತಾರಾಧನ-ಪರಾಯಣರಾಗಿಯೂ ಅನ್ಯ ಲಾಂಛನ ಸಂಯುಕ್ತರಾದರೆ, ಅವರು ಈಮಹಾ ಮನ್ತ್ರೋಪದೇಶಕ್ಕೆ ಅಧಿಕಾರಿಗಳಾವುದಿಲ್ಲ" ಎಂಬುದಾಗಿ ಇದೆ.

ಮತ್ತು ಅದೇ ಸೂಕ್ಷ್ಮಾಗಮದ ೩ನೇ ಪುಟದಲ್ಲಿ—

ವೇದಾಗಮೇಷು ಸರ್ವೇಷು ಸಂಸ್ಥಿತೋಯಂ ಮಹಾಮನುಃ ॥೧೭॥
ಸಮಸ್ತ ಫಲದಸ್ತಸ್ಮಾದ್ಗ್ರಾಹ್ಯೋಯೋ ವೈದಿಕತಾಂತ್ರಿಕೈಃ ॥

ಎಲ್ಲ ವೇದಾಗಮಗಳಲ್ಲಿಯೂ, ಉಪಸ್ಥಿತ ಮಹಾಮಂತ್ರವಾದೀ ಪ್ರಣವವಿಶಿಷ್ಟ ಪಂಚಾಕ್ಷರವು, ವೈದಿಕರಿಂದಲೂ ಮತ್ತು ತಾಂತ್ರಿಕರಿಂದಲೂ ( ಶ್ರೌತ-ಸ್ವತಂತ್ರರಿಬ್ಬರಿಂದಲೂ ಎಂಬುದು ಭಾವವು) ಅರಿಯಲಿಕ್ಕೆ ಯೋಗ್ಯವಾ-ಗಿದೆ ಯಾಕಂದರೆ- ಇದು ಎಲ್ಲರಿಗೂ, ಅಂದರೆ ವೈದಿಕ- ತಾಂತ್ರಿಕರಿ-ಬ್ಬರಿಗೂ, ಫಲಪ್ರದವಾಗಿದೆಯೆಂದು ಹೇಳಿದೆ

ಇದರಿಂದ ಮೇಲ್ಕಂಡ ಚಂದ್ರಜ್ಞಾನಾಗಮದಲ್ಲಿ ಉಕ್ತವಾದಂತೆ 'ಸೂಕ್ಷ್ಮಾಗಮ'ದಲ್ಲಿಯೂ ಶ್ರೌತ- ಸ್ವತಂತ್ರ ಧರ್ಮಗಳು ವೈದಿಕ- ವೇದ ವಿರುದ್ಧಗಳೆಂದೂ, ವೈದಿಕ- ತಾಂತ್ರಿಕಗಳೆಂದೂ ಪರ್ಯಾಯವಾಗಿ ಹೇಳಲ್ಪಟ್ಟಿವೆ ಮತ್ತು ಆಗಮಸಾರ ಸರ್ವಸ್ವವೂ, ನಿಗಮರಹಸ್ಯವೂ ಆದ ವೀರಶೈವ ಮತಭಾಷ್ಯಕಾರಿಕೆಯ (ಕ್ರಿಯಾಸಾರದ)ಲ್ಲಿ " ವೇದವಿಹಿತ " "ವೇದವಿರುದ್ಧ"ಗಳೆಂದೂ ಪರ್ಯಾಯವಾಗಿ ಹೇಳಲ್ಪಟ್ಟಿವೆ. ಎಂಬುದನು ಓದುಗರು ನೆನಪಿನಲ್ಲಿಡಬೇಕೆಂದು ಬೇರೆ ಹೇಳಬೇಕಾಗಿಲ್ಲ

ಇನ್ನು ಚಂದ್ರಜ್ಞಾನಾಗಮದಲ್ಲಿ ೧೫ನೆಯ ಪಟಲದಲ್ಲಿ—

ತುರೀಯಾಶ್ರಮಸೇವಿತು ನಿರಾಭಾರೀತಿ ಚೋಚ್ಯತೇ ||
**ಸ್ವತಂತ್ರೇ** ತ್ಯಕ್ತದಾರಾದಿರ್ನಿರಾಭಾರೀತಿ ಕಥ್ಯತೇ ||೪೨||

**ಶ್ರೌತದಲ್ಲಿ—** ಚತುರ್ಥಾಶ್ರಮಭಾಗಿಯು ನಿರಾಭಾರಿಯೆಂದು ಹೇಳ-ಲ್ಪಡುತ್ತಾನೆ ಮತ್ತು, **ಸ್ವತಂತ್ರದಲ್ಲಿ—** ಬಿಡಲ್ಪಟ್ಟ ಪತ್ನೀಪುತ್ರರುಳ್ಳವನು ನಿರಾಭಾರಿಯೆಂದು ಹೇಳಲ್ಪಡುತ್ತಾನೆ

ಈಗ ಎಲ್ಲ ಕಡೆಯಲ್ಲಿ, ಉಪಲಬ್ಧವಿರುವ ಕಾರಣಾಗಮದ ಉತ್ತರ-ಭಾಗದ ಪಾರ್ವತೀಪರಮೇಶ್ವರ ಸಂವಾದಾತ್ಮಕ ಕ್ರಿಯಾಪಾದದಲ್ಲಿ ಪೂಜಾ ವಿಧಿಯನ್ನು ಹೇಳುವಾಗ, ೭ನೆಯ ಮತ್ತು ೮ನೆಯ ಪಟಲಗಳಲ್ಲಿ ಕ್ರಮ-ವಾಗಿ **"ವೈದಿಕ ತಾಂತ್ರಿಕ"**ವೆಂಬ ಈ ಬಗ್ಗೆ ಪ್ರತ್ಯೇಕವಾಗಿ ಎರಡು ಪ್ರಕರಣಗಳೇ ಇವೆ

ಈ ಬಗೆಯಿಂದ ಶಿವಾಗಮಗಳಲ್ಲಿ ಶ್ರೌತ-ಸ್ವತಂತ್ರಾಗಮಗಳ ಉದಾಹರಣೆಗಳು ಪ್ರಸಿದ್ಧವೆಂದು ತಿಳಿಯಲ್ವೇಳ್ಕುಂ

## ಶ್ರೌತ-ಸ್ವತಂತ್ರವಾದರೂ ವೀರಶೈವವು ವೈದಿಕವೇ

ಈ ಬಗೆಯಿಂದ "ಚಂದ್ರಜ್ಞಾನಾಗಮ" "ಸೂಕ್ಷ್ಮಾಗಮ" ಆಗಮ ಸಾರವಾದ ಕ್ರಿಯಾಸಾರಗಳಿಂದ ವೀರಶೈವವು ದ್ವೈವಿಧ್ಯವಾಗಿ ನಿರೂಪಿಸಲ್ಪಟ್ಟಿದ್ದು ಇಲ್ಲಿ "ವೇದವಿಹಿತ" "ವೇದವಿರುದ್ಧ" ವೆಂಬಲ್ಲಿ ೨ನಯ ವಿಭಾಗವಾದ "ವೇದವಿರುದ್ಧ" ಎಂಬ ಪದವನ್ನು ಮನಸ್ಸಿನಲ್ಲಿ ತಂದು ಇದು "ವೇದಬಾಹ್ಯ" ವೆಂದು ಅಜ್ಞತನದಿಂದ ಅಪಲಪಿಸಿ ಕೆಲವರು—

ದ್ವಿಜಾನಾಂ ವೈದಿಕಂಪ್ರೋಕ್ತ ಮನ್ಯೇಷಾಂ ತಾಂತ್ರಿಕಂ-ಸ್ಮೃತಂ ||

ಎಂಬೀ ಕಾರಣಾಗಮ ವಚನವನ್ನು ಮುಂದೆಮಾಡಿ ವೀರಶೈವ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ದ್ವಿಜರಿಗ ವೈದಿಕ ವೀರಶೈವವೂ, ಇತರರಿಗೆ "ತಾಂತ್ರಿಕ" ವೀರಶೈವವೂ ಎಂದು ಹೇಳತೊಡಗಿ ಜಾತೀಯತೆಯಿಂದ "ತಾಂತ್ರಿಕ" ರು ನಿಕೃಷ್ಟರೆಂದೂ ಹೇಳುತ್ತ, ಅವರಿಗ ವೇದಬಾಹ್ಯತ್ವದ ಆರೋಪಮಾಡಿ "ಶ್ರುತ್ಯನ್ಯತ್ವಾದಾಗಮಾನಾಂ ತಜ್ಜ್ಞಾನಂನೈವಮೋಕ್ಷದಂ ಅವೈದಿಕಾನಾ ಮುದ್ಧಾರಸ್ತಂತ್ರ ಮಾರ್ಗಾನುಸಾರತಃ" ಆಗಮಗಳು ಶ್ರುತಿಗಳಿಗೆ ಅನ್ಯವಾಗಿರುವುದರಿಂದ "ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ" ಇತ್ಯಾದಿ ಶ್ರುತಿವಚನಗಳಿಂದ ಆ ಆಗಮಜ್ಞಾನವು ಮೋಕ್ಷಪ್ರದವಲ್ಲ. ಆದುದರಿಂದ ಅವೈದಿಕರ ಉದ್ಧಾರವು ತಂತ್ರಮಾರ್ಗದಿಂದಲೇ ಎಂಬೀ ವಾಕ್ಯಗಳನ್ನಾಡುತ್ತ ಮತ್ತು "ವೇದಮಾರ್ಗ ಪ್ರಚ್ಯುತಾನಾಂ ತಂತ್ರ ಮಾರ್ಗಾವಲೋಕನಂ" "ವೇದಮಾರ್ಗಭ್ರಷ್ಟರಾದ ಅವೈದಿಕರಿಗೆ, ತಂತ್ರ ಮಾರ್ಗದ ಅವಲೋಕನವು" ಇಂತೆಂಬ ವಚನಗಳನ್ನೇ ಪ್ರಮಾಣಕ್ಕಿಡ ಬಹುದೆಂದರೆ, ಸಲ್ಲದು ಅದೇನು ಕಾರಣವೆಂದರೆ—

ಪದವಾಕ್ಯ ಪ್ರಮಾಣಜ್ಞರಾದ ಶ್ರೀಮರಿತೋಂಟದಾರ್ಯರು ತಮ್ಮ "ವೀರಶೈವಾನಂದ ಚಂದ್ರಿಕೆ" ಯ ೨೦ನಯ ಪ್ರಕರಣದಲ್ಲಿ ಇಂತಹ

ಆಕ್ಷೇಪಗಳನ್ನು ಮುಂದೆ ಮಾಡಿ ಅವುಗಳಿಗೆ ಹೀಗೆ ಉತ್ತರಿಸಿರುವರು. ಏನೆಂದರೆ—

"ಇತ್ಯಾದಿ ವಚನೈರ್ವೇದಾವಿರುದ್ಧ ವರ್ಣಾಶ್ರಮಾದಿ ಧರ್ಮಪ್ರತಿ ಪಾದಕತ್ವೇನ ಸರ್ವಾಪ್ತ ಪರಮೇಶ್ವರೈಕಕರ್ತೃಕತ್ವೇನ ಚಾಗಮಪ್ರಾಮಾಣ್ಯಸ್ಯ ಶಿಷ್ಟೈರಭ್ಯುಪಗಂತವ್ಯತ್ವಾ ದಾಗಮೋಕ್ತಾಚಾರಾಣಾಂ ಸರ್ವೇಷಾಂ ವೈದಿಕಾನುಷ್ಠೇಯತ್ವಂ ಸಿದ್ಧಂ"

"ಅಷ್ಟಾದಶ ಪುರಾಣಾನಾಂ" "ವೇದಸಿದ್ಧಾಂತಯೋರೈಕ್ಯಂ" "ಪರಸ್ಪರಾ ವಿರುದ್ಧಾರ್ಥಾಃ" ಇತ್ಯಾದಿ ವ್ಯಾಸ-ರೇಣುಕ-ನೀಲಕಂಠ ಶಿವಾಚಾರ್ಯಾದಿಗಳ ವಚನಗಳಿಂದ ವೇದಕ್ಕೆ ವಿರುಧ್ಧವಲ್ಲದ ವರ್ಣಾಶ್ರಮ ಧರ್ಮಪ್ರತಿಪಾದಕತ್ವದಿಂದಲೂ, ಸರ್ವಾಪ್ತನಾದ ಪರಮೇಶ್ವರನೆ ಮುಖ್ಯ ಕರ್ತೃವಾದತನದಿಂದಲೂ, ಶಿಷ್ಟರು ಪ್ರಾಮಾಣ್ಯವನ್ನೊಪ್ಪಿರುವುದರಿಂದ ಎಲ್ಲ ಆಗಮೋಕ್ತಾಚಾರಗಳಿಗೆ ವೈದಿಕರಿಂದ ಅನುಷ್ಠೇಯತ್ವವು ಸಿದ್ಧವಾಗುತ್ತಿದೆ.

"ವೀರಶೈವ ಷಟಸ್ಥಲ ಬ್ರಹ್ಮದೀಪಿಕೆ" ಯಲ್ಲಿ ಉದಾಹೃತ ಕಾಮಿಕಾಗಮವು—

ಸಿದ್ಧಾಂತೋ ವೇದಸಾರಃ ಸ್ಯಾದನ್ಯಚ್ಚೇತ್ತುಬಹಿಷ್ಕೃತಂ ||
ಸಿದ್ಧಾಂತವಿಹಿತಾಚಾರೋ ವೈದಿಕಾಚಾರ ಉಚ್ಯತೇ ||

ಕಾಮಿಕಾದಿ ಶಿವಾಗಮದ ಅಪರನಾಮವಾದ "ಸಿದ್ಧಾಂತ" ವು ವೇದಸಾರವಾಗುವದು ಇತರವಾದುದಾದರೋ-ಬಹಿಷ್ಕೃತವು ಅದು ಕಾರಣ ಸಿದ್ಧಾಂತ ವಿಹಿತವಾದ ಆಚಾರವು ವೈದಿಕಾಚಾರವೆಂದು ಹೇಳಲ್ಪಡುತ್ತಿದೆ. ಎಂಬುದಿಲ್ಲಿ ಪ್ರಮಾಣವು

ಇದರಿಂದ ಕಾಮಿಕಾದಿ ವಾತುಲಾಂತ ಶಿವಾಗಮಗಳ ಆಚರಣೆಗಳು, ಎಲ್ಲ ವೈದಿಕರ ಅನುಷ್ಠೇಯಗಳಾಗಬೇಕಾದರೆ ಅವು ವೇದಬಾಹ್ಯ ಕಾಪಾಲಾದಿ ತಂತ್ರಗಳಂತೆ ಅವೈದಿಕಗಳಲ್ಲವಾದುದರಿಂದ ಪರಮ ವೈದಿಕವಾದು

ವೆಂದೂ ಬೇರೆ ಹೇಳಬೇಕಾಗಿಲ್ಲ. ಆದುದರಿಂದ ಮೇಲೆ ಅಕ್ಷೇಪದಲ್ಲಿ ಹೇಳಿದಂತೆ "ಶ್ರುತ್ಯನ್ಯತ್ವ" ಮೊದಲಾದ ಕಲ್ಪನೆಯು ಸಲ್ಲದು. ವೀರಶೈವ ಮತಭಾಷ್ಯಕಾರಿಕೆಯಲ್ಲಿ—

ಅಲ್ಪಬುದ್ಧಿಭಿರನ್ಯೋನ್ಯ ವಿರೋಧಃ ಪರಿಕಲ್ಪ್ಯತೇ ||

—ಉಪೋದ್ಘಾತ ಶ್ಲೋಕ ೩೧

ಎಂಬಂತೆ ವೇದಾಗಮಗಳಿಗೆ ವಿರುದ್ಧವನ್ನು ಕಲ್ಪಿಸುವದು ಅಲ್ಪಬುದ್ಧಿಗಳ ಕರ್ತವ್ಯವೆಂದು ಉದ್ಘೋಷಿಸಲ್ಪಟ್ಟಿದೆ. ಅದುಕಾರಣ ಪ್ರಥಮತಃ ಶಿವಾಗಮಗಳು ವೈದಿಕವಿದ್ದು ತತ್ಪ್ರತಿಪಾದಿತ ಧರ್ಮವೆಲ್ಲವೂ ವೈದಿಕವೆಂದೇ ಹೇಳಬೇಕಾಗುತ್ತಿದೆ ಅದರಲ್ಲಿಯೂ ಲಿಂಗ–ರುದ್ರಾಕ್ಷ–ಭಸ್ಮಧಾರಣಾದಿಕ ವ್ರತವಾದರೋ ವೈದಿಕವೆಂಬುದು ಸಿದ್ಧಾಂತವು. ಈ ಬಗ್ಗೆ ಕೂರ್ಮ ಪುರಾಣವು "ಪಾಶುಪತ ವ್ರತವು ತಾಂತ್ರಿಕವೂ, ವೈದಿಕವೂ ಮತ್ತು ಮಿಶ್ರವೂ ಎಂದು ಮೂರೆರನಾಗಿದ್ದು, ಅವುಗಳಲ್ಲಿ ವೈದಿಕ ಪಾಶುಪತವಾದ ವೀರಶೈವವೇ ಶ್ರೇಷ್ಠವೆಂದು ಕೆಳಗಣ ಶ್ಲೋಕಗಳಿಂದ ತಿಳಿಯುತ್ತಿದೆ.

ನಿರ್ಮಿತಂಹಿಮಯಾಪೂರ್ವಂ ವ್ರತಂ ಪಾಶುಪತಂ ಶುಭಂ ||
ಗುಹ್ಯಾದ್ಗುಹ್ಯತಮಂ ಸೂಕ್ಷ್ಮಂ ವೇದಸಾರಂ ವಿಮುಕ್ತಯೇ ||
ಏಷಪಾಶುಪತಾಚಾರಃ ಸೇವನೀಯೋ ಮುಮುಕ್ಷುಭಿಃ ||
ತಾಂತ್ರಿಕಂ ವೈದಿಕಂ ಮಿಶ್ರಂ ತ್ರಿಧಾಪಾಶುಪತಂ ಸ್ಮೃತಂ ||
ತಪ್ತಲಿಂಗಾಂಕ ಶೂಲಾದಿಧಾರಣಂ ತಾಂತ್ರಿಕಂ ಮತಂ ||
ಲಿಂಗರುದ್ರಾಕ್ಷ ಭಸ್ಮಾದಿಧಾರಣಂ ವೈದಿಕಂಭವೇತ್ ||
ರವಿಂಶಂಭುಂತಥಾಶಕ್ತಿಂ ವಿಘ್ನೇಶಂಚ ಜನಾರ್ದನಂ ||
ಯಜಂತಿ ಸಮಭಾವೇನ ಮಿಶ್ರಪಾಶುಪತಂಹಿತತ್ ||
ವೇದಮಾರ್ಗೈಕನಿಷ್ಠಾನಾಂ ಮುಮುಕ್ಷೂಣಾಂ ನಿರಂತರಂ ||
ಶ್ರೌತಂ ಪಾಶುಪತಂ ಗ್ರಾಹ್ಯಂನಗ್ರಾಹ್ಯೇ ಮಿಶ್ರತಾಂತ್ರಿಕೇ ||

ಎಂಬೀ ಪ್ರಮಾಣವು ಶ್ರೀಕರಭಾಷ್ಯದ ಪುಟ ೯೫ ಮತ್ತು ಕೈವಲ್ಯೋಪ
ನಿಷತ್ ಸಾದಾ ಶಿವಭಾಷ್ಯದ ಪುಟ ೩೦ ರಲ್ಲಿಯೂ ವೀರಶೈವಧರ್ಮ
ಶಿರೋಮಣಿ" ಯ ಪುಟ ೧೫೮ ರಲ್ಲಿಯೂ ಉದ್ಧೃತವಾಗಿದೆ

ಇದರಿಂದ ಲಿಂಗರುದ್ರಾಕ್ಷ ಭಸ್ಮಧಾರಣವುಳ್ಳ ವ್ರತವು ವೈದಿಕವೆಂದೇ ಸ್ಪಷ್ಟವಾಗುತ್ತಿದೆ ಈ ಬಗ್ಗೆ— "ಲಿಂಗ-ರುದ್ರಾಕ್ಷ-ಭಸ್ಮ ಮೊದಲಾದ ಅಷ್ಟಾವರಣಗಳ ವಿಜ್ಞಾನಿಯೂ, ಪಂಚಾಚಾರಪರಾಯಣನೂ ಆದ ವೀರಶೈವನು ಜ್ಞಾನವೇ ಮುಖ್ಯ ಫಲಸಾಧನವುಳ್ಳ ವೈದಿಕ ಕರ್ಮವನ್ನು ಆಚರಿಸತಕ್ಕದ್ದು ವೀರಶೈವನು ಪಾಶವ ಕರ್ಮವನ್ನು ಎಂದೂ ಆಚರಿಸತಕ್ಕದ್ದಿಲ್ಲ ವೈದಿಕರೇ ಎಂದು ಪ್ರಸಿದ್ಧರಾದ ಯತಿಗಳು ಹೇಗೆ ಪತಿಕರ್ಮಗಳನ್ನು ಆಚರಿಸುತ್ತಾರೋ ಹಾಗ ಪಂಡಿತರು ತಿಳಿಯತಕ್ಕದ್ದು ತತ್ವಜ್ಞಾನವೇ ಏಕಸಾಧ್ಯವಾದ ಪತಿಕರ್ಮಗಳನ್ನು ಆಗಮತತ್ಪರನು ಆಚರಿಸತಕ್ಕದ್ದು ಏಕೆಂದರೆ, ಆಗಮಾರ್ಥಗಳೇ ವೇದಸಿದ್ಧಗಳಾಗಿವೆ ಅದು ಕಾರಣ ಜ್ಞಾನೈಕ ಫಲಸಾಧನವುಳ್ಳ ಶಿವಾಗಮೋಕ್ತವಾದ ಎಲ್ಲ ಪತಿಕರ್ಮಗಳು 'ವೈದಿಕ' ವಾಗಿವೆ ಎಂದು ವೀರಶೈವ ಮತಭಾಷ್ಯಕಾರಿಕೆಯು ನಿರೂಪಿಸುವದು ಈ ಕೆಳಗಣ ಕಾರಿಕೆಗಳಿಂದ ತಿಳಿಯುತ್ತಿದೆ—

ಅಷ್ಟಾವರಣ ವಿಜ್ಞಾನೀ ಪಂಚಾಚಾರಪರಾಯಣಃ ||
ವೈದಿಕಂ ಕರ್ಮಕುರ್ವೀತ ಜ್ಞಾನೈಕಫಲಸಾಧನಂ || ೨೯೬ ||
ನಕುರ್ಯಾತ್ಪಾಶವಂ ಕರ್ಮವೀರಶೈವಃ ಕದಾಚನ ||
ವೈದಿಕಾಏವಯತಯಃ ನಾಚರಂತಿ ಯಥಾಬುಧಾಃ || ೨೯೭ ||
ತತ್ವಜ್ಞಾನೈಕಸಾಧ್ಯಾನಿ ಕುರ್ವೀತಾಗಮತತ್ಪರಃ ||
ಆಗಮಾರ್ಥಾ ವೇದಸಿದ್ಧಾ ವೈದಿಕಾ ಆಗಮೋದಿತಾಃ || ೨೯೮ ||

—ಉಪದೇಶ ೪ ಪುಟ ೧೩೦

ಅದುಕಾರಣ ಕ್ರಿಯಾಸಾರದ ೨ನೆಯ ಉಪದೇಶದಲ್ಲಿ—

ತತ್ರಾಪಿಜ್ಞಾನಕಾಂಡೋಕ್ತ ಧರ್ಮಾನುಷ್ಠಾನಮೇವಹಿ ||
ನಿಶ್ಶ್ರೇಯಸಫಲಾಯಾಪಿ ಕಲ್ಪತೇಮುಖ್ಯಮೇತತ್ || ೫೨ ||
ತಸ್ಮಾದ್ವೈದಿಕತಾತಂತ್ರೇ ತಾಂತ್ರಿಕಂಚಾಪಿವೈದಿಕೇ ||

ಆದರಲ್ಲಿಯೂ ಜ್ಞಾನಕಾಂಡೋಕ್ತ ಧರ್ಮಾನುಷ್ಠಾನವೂ, ಮೋಕ್ಷ ರೂಪ ಫಲಕ್ಕಾಗಿಯೇ ಸಮರ್ಥವಿದೆ ಎಂಬೀ ಮಾತೇ ಮುಖ್ಯವಾಗಿದೆ ಅದುಕಾರಣ ತಂತ್ರದಲ್ಲಿ ವೈದಿಕತೆಯುಂಟು ಅವುದರಿಂದ ತಾಂತ್ರಿಕವಾದರೂ ವೈದಿಕವೇ ಆಗಿದೆ ಎಂದು ಹೇಳಿದೆ ಮತ್ತು ಅದೇ ಕ್ರಿಯಾಸಾರದ ಚತುರ್ಥೋಪದೇಶದಲ್ಲಿ--

" ತಾಂತ್ರಿಕಂ ದ್ವಿವಿಧಂ ವೇದವಿಹಿತಂ ತದ್ವಿರುದ್ಧಕಂ || ೩೦೫ ||
ಪ್ರಮಾಣಮುಭಯಂಚಾಪಿ ಪರಮಾರ್ಥೋಪದೇಶತಃ ||

ತಾಂತ್ರಿಕವಾದ ವೀರಶೈವವು, ವೇದವಿಹಿತ ಮತ್ತು ವೇದವಿರುದ್ಧವೆಂದು ದ್ವಿವಿಧವಾದರೂ, ಪರಮಾರ್ಥೋಪದೇಶದ ಮೂಲಕವಾಗಿ ಉಭಯವೂ ಪ್ರಮಾಣವಾಗಿದೆ ಎಂದು ನಿರೂಪಿಸಲ್ಪಟ್ಟಿದೆ ಮತ್ತು ಅದೇ ಕ್ರಿಯಾಸಾರದ ೪೮೭ ನೆಯ ಪುಟದಲ್ಲಿ—

ಶಿವೋದಿತ ಸ್ತತಃ ಸರ್ವಂ ವೀರಶೈವಂಹಿ ವೈದಿಕಂ ||

" ಶಿವೋಕ್ತವಾದ ಕಾರಣ ವೈದಿಕ- ತಾಂತ್ರಿಕ ರೂಪವಾದ ಎಲ್ಲತೆರನಾದ ವೀರಶೈವವು ವೈದಿಕವು ಎಂದು ಸಿದ್ಧಗೊಳಿಸಲ್ಪಟ್ಟಿದೆ

ಆದುದರಿಂದ ' ಸ್ವತಂತ್ರ ' ವೀರಶೈವಕ್ಕೆ ಶಿವಶಾಸ್ತ್ರದಲ್ಲಿ— ವೇದ-ವಿರುದ್ಧ ವೇದವಿರೋಧಿ- ಅವೈದಿಕ-ಅಶ್ರೌತ- ತಾಂತ್ರಿಕ ಮುಂತಾದ ಪದಗಳು ಪರ್ಯಾಯವಾಚಕವಾಗಿ ಪರಶಿವನಿಂದಲೇ ಹೇಳಲ್ಪಟ್ಟಿವೆ ಎಂಬುದನ್ನು ವಾಚಕರು ಅವಶ್ಯವಾಗಿ ನೆನಪಿನಲ್ಲಿಡತಕ್ಕದ್ದು ಆದರೂ ವೇದ-ಬಾಹ್ಯವಾದ ಕಾಪಾಲಿಕಾದಿ- ತಾಂತ್ರಿಕ ಮತಗಳಂತೆ ವೀರಶೈವವಲ್ಲ ಏಕೆಂದರೆ 'ವೇದಸಮ್ಮತ ಉಚ್ಯತೇ' ಎಂಬೀ ರೇಣುಕ ಗುರುಗಳ ಆಜ್ಞೆ-ಯಂತೆ ಶಿವಾಗಮವು ಪ್ರಥಮತಃ ವೈದಿಕವಿದ್ದು ತತ್ಪ್ರತಿಪಾದಿತವೂ, ವೈದಿಕೋತ್ತಮವೂ, ಆದ ವೀರಶೈವವು 'ತಾಂತ್ರಿಕ'ವೆಂಬುದಕ್ಕೆ ಮೇಲೆಯೇ ಸ್ಫುಟವಿದೆ ಆದುದರಿಂದ ಮೇಲೆ ಆಕ್ಷೇಪಿಸದಂತೆ ಇದು ನಿಕೃಷ್ಟವಲ್ಲ-ವೆಂದಿಲ್ಲಿ ತಿಳಿಯುತ್ತಿದೆ

ಅದುಕಾರಣ ಶ್ರೌತ-ಸ್ವತಂತ್ರವಾದರೂ, ವೀರಶೈವವು, ವೈದಿಕವೇ ಯೆಂದು ಸಿದ್ಧವಾಗುತ್ತಿದೆ

# ವೀರಶೈವರು ಅತ್ಯಾಶ್ರಮಿಗಳು ಅಥವಾ ಅತಿವರ್ಣಾಶ್ರಮಿಗಳು

ವೀರಶೈವರು ಜೀವಭಾವದಲ್ಲಿ ಪಾರಮಾರ್ಥಿಕವಾದ ಭೇದವನ್ನೂ, ಶಿವಭಾವದಲ್ಲಿ ಪಾರಮಾರ್ಥಿಕವಾದ ಅಭೇದವನ್ನೂ ಹೇಳುತ್ತಾರೆ ಇವರಿಗ ಸರ್ವಸಾಮಾನ್ಯವಾಗಿ 'ಅತ್ಯಾಶ್ರಮಿಗಳು' 'ಅತಿವರ್ಣಾಶ್ರಮಿಗಳು' ಎಂದು ಕರೆವುದು, ಶಿವಶಾಸ್ತ್ರದ ರೂಢಿಯುಂಟು —

ಲಿಂಗಂಶಿವೋಭವೇತ್‌ಕ್ಷೇತ್ರಮಂಗಂಸಂಯೋಗಆಶ್ರಯಃ ||
ತಸ್ಮಾಲ್ಲಿಂಗಾಂಗಸಂಯುಕ್ತಃ ಸೋऽಪಿಚಾತ್ಯಾಶ್ರಮೀ ಭವೇತ್ ||

ಲಿಂಗವು ಶಿವನು ಅಂಗವು ಕ್ಷೇತ್ರವು ಸಂಯೋಗವೇ ಆಶ್ರಯವು ಆದುದರಿಂದ ಲಿಂಗಾಂಗ ಸಂಯುಕ್ತನಾದವನಾವನಾದರೂ 'ಅತ್ಯಾಶ್ರಮಿ'ಯಾಗುವನು ಎಂದು ಶಿವಾಗಮವಚನವುಂಟು ಮತ್ತು—

ಯೋವರ್ಣಾನಾಶ್ರಮಾನ ಸರ್ವಾನ್ ಶೀತ್ಯಸ್ವಾತ್ಮನಿಸ್ಥಿತಃ ||
ಸೋऽತಿವರ್ಣಾಶ್ರಮೀ ಪ್ರೋಕ್ತಃ ಸರ್ವವೇದಾರ್ಥವಾದಿಭಿಃ ||
ಅತಿವರ್ಣಾಶ್ರಮಾಃ ಪೂರ್ವಂನಂದ್ಯಾದಿ ಪ್ರಮಥಾಃ ಸ್ಮೃತಾಃ ||
ತತ್ಸಂತಂತಿ ಸಮಾಯಾತಾ ವೀರಶೈವಾ ಇತಿಶ್ರುತಾಃ ||
ಏಷಪಾಶುಪತೋಯೋಗಃ ಪಶುಪಾಶ ವಿಮುಕ್ತಯ ||
ಸರ್ವವೇದಾಂತ ಸಾರೋऽಯ ಮತ್ಯಾಶ್ರಮ ಇತಿಶ್ರುತಿಃ ||

ಯಾವನು ವರ್ಣಗಳನ್ನು ಆಶ್ರಮಗಳನ್ನು ಅತಿಕ್ರಮಿಸಿ ಆತ್ಮೀಯ ಆತ್ಮತತ್ವದಲ್ಲಿ ನಿಲ್ಲುವನೋ ಅವನು ಎಲ್ಲ ವೇದಾರ್ಥವಾದಿಗಳಿಂದ 'ಅತಿವರ್ಣಾಶ್ರಮಿ'ಯೆಂದು ಹೇಳಲ್ಪಟ್ಟನು ನಂದಿ–ಭೃಂಗಿ–ವೀರ–ವೃಷಭ– ಸ್ಕಂದ–ರೇಣುಕ–ದಾರುಕಾದಿ ಪ್ರಮಥರು ಪ್ರಥಮತಃ ಅತಿವರ್ಣಾಶ್ರಮಿಗಳಾಗಿ ಸ್ಮರಿಸಲ್ಪಟ್ಟರು ತತ್ಸಂಪ್ರದಾಯವಾಗಿ ಬಂದವರೇ ವೀರಶೈವರೆಂದು ವಿಖ್ಯಾತರಾಗಿದ್ದಾರೆ ಪಶುಪಾಶಗಳ ಬಿಡುಗಡೆಗೆ ಈ ಪಾಶುಪತ ಯೋಗವು ಸಮರ್ಥವಾಗಿದೆ ಇದು ಸರ್ವವೇದಾಂತಸಾರವು ಇದಕ್ಕೆ "ಅತ್ಯಾಶ್ರಮ" ವೆಂದು ಶೃತಿಯು ಸಾರುತ್ತಿದೆ ಎಂದು ಪ್ರಮಾಣಗಳುಂಟು

ಇದರಿಂದ 'ಅತ್ಯಾಶ್ರಮಿ" ಗಳು ಅಥವಾ "ಅತಿವರ್ಣಾಶ್ರಮಿ"ಗಳು ಎಂಬುದು ವೀರಶೈವರ ಪರ್ಯಾಯ ನಾಮಗಳೆಂಬುದು ತಿಳಿಯಬರುತ್ತಿದೆ ಕ್ರಿಯಾಸಾರದಲ್ಲಿ—

ವೀರಶೈವೀಯ ಸಮಯಾ ಅತ್ಯಾಶ್ರಮಪುರಸ್ಸರಾಃ ||
ನಿರಾಭಾರಾದಿಭೇದೇನ ಭಿನ್ನಾ ನಿಯಮಿನಸ್ಸ್ಮೃತೇ ||

ಕ್ರಿ ಸಾ ಉ ೫, ಶ್ಲೋಕ ೩೦

ವೀರಶೈವರ ಸಂಬಂಧವಾದ "ಅತ್ಯಾಶ್ರಮ" ಪುರಸ್ಸರವಾದ ಆಚರಣೆಗಳು ಸಾಮಾನ್ಯ ವಿಶೇಷ ನಿರಾಭಾರವೆಂಬ ಕ್ರಿಯಾಭೇದದಿಂದ ಪ್ರಸಿದ್ಧವಾಗಿವ ಅದುಕಾರಣ ಅವರು ಪ್ರಾಕೃತ ವರ್ಣಗಳಿಗಿಂತ ಭಿನ್ನನಿಯಮವುಳ್ಳವ ರಾಗಿದ್ದಾರೆ ಎಂದು ನಿರೂಪಿಸಿರುವದರಿಂದ "ಅತ್ಯಾಶ್ರಮಿತ್ವ"ವು ಸಿದ್ಧ ಸಾದಕರಿಬ್ಬರಿಗೂ ಸರ್ವಸಾಮಾನ್ಯವಾಗಿದೆ ಸಿದ್ಧದಸೆಯಲ್ಲಿ ವೀರಶೈವನು—

ದೇಹಜಾತ್ಯಾದಿ ಸಂಬಂಧಾನ್ ವರ್ಣಾಶ್ರಮಸಮನ್ವಿತಾನ್ ||
ವೇದಶಾಸ್ತ್ರ ಪುರಾಣಾನಿ ಪಾದಪಾಂಸುಮಿವತ್ಯಜೇತ್ ||

ಎಂಬ ಶ್ರೀಕರಭಾಷ್ಯ ಪ್ರಮಾಣದಂತೆ ದೇಹಜಾತಿ ಸಂಬಂಧವುಳ್ಳ ವರ್ಣಾಶ್ರಮ ಸಮನ್ವಿತವಾದ ವೇದಶಾಸ್ತ್ರ ಪುರಾಣಗಳನ್ನು ಪಾದಧೂಳಿಯಂತೆ ಪರಿತ್ಯಜಿಸಬೇಕಾಗುತ್ತಿದೆ ಇದನ್ನುದ್ದೇಶಿಸಿಯೇ ಶಿವಶರಣರು ತಮ್ಮ ವಚನಗಳಲ್ಲಿ— "ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ ತರ್ಕದ ಬೆನ್ನಬಾರನೆತ್ತುವೆ ಆಗಮದ ಮೂಗಕೊಯ್ವೆ ನೋಡಯ್ಯ ಮಹಾದಾನಿ ಕೂಡಲಸಂಗಮದೇವ ಮಾದರ ಚನ್ನಯ್ಯನ ಮಗನಾನಯ್ಯ" ಎಂಬುದಾಗಿ ನಿರೂಪಿಸಿರುವರು.

ಇದರಿಂದ ಜೀವನ್ಮುಕ್ತರಾದ ವೀರಶೈವರಿಗೆ ವರ್ಣಾಶ್ರಮ ಪರಿತ್ಯಾಗವು ಅಭಿಹಿತವಾಗಿದ್ದರೆ, ಸಾಧಕದಶೆಯಲ್ಲಿ ವರ್ಣಾಶ್ರಮ ಸಮನುಷ್ಠಾನವು ಅವರಿಗೆ ಅದು ಪರಶಿವನಿಂದಲೇ ಆಜ್ಞಪ್ತವಾಗಿದೆಯೆಂದು ತಿಳಿಯುತ್ತಿದೆ ಇಂತಹ ಸಿದ್ಧ-ಸಾಧಕೋಭಯರಿಗೂ ಸಾಧಾರಣವಾಗಿ 'ಅತ್ಯಾಶ್ರಮಿ' 'ಅತಿವರ್ಣಾಶ್ರಮಿ' ಶಬ್ದಗಳು ಸಮಂಜಸವಾಗುತ್ತಿವೆ ಹೇಗೆಂ

ಪರಿ– 'ಪ್ರಕರ್ಷೇ ಲಂಘನೇಽಭ್ಯತಿ' ಎಂದಮರಕೋಶವುಂಟು ಇದರಿಂದ ಪ್ರಕರ್ಷದಲ್ಲಿಯೂ, ಲಂಘನಾರ್ಥದಲ್ಲಿಯೂ 'ಅತಿ' ಪದವಿರುವದರಿಂದ ಸಾಧಕದಶೆಯಲ್ಲಿ ಪ್ರಕರ್ಷಾರ್ಥವೂ, ಸಿದ್ಧದಶೆಯಲ್ಲಿ ಲಂಘನಾರ್ಥವೂ ಸಿದ್ಧಿಸುವದರಿಂದ ಸಂಗತವಾಗುತ್ತಿದೆ ಇದರಿಂದ ಸಾಧಕದಶೆಯಲ್ಲಿ 'ಅತ್ಯಾಶ್ರಮಿ' ಗಳು ಎಂಬಲ್ಲಿ ಶ್ರೇಷ್ಠಾಶ್ರಮಿಗಳೆಂದೂ, 'ಅತಿವರ್ಣಾಶ್ರಮಿ' ಗಳೆಂಬಲ್ಲಿ ಶ್ರೇಷ್ಠವಾದ ವರ್ಣಾಶ್ರಮಿಗಳೆಂದೂ ಹೇಳಿದರೆ, ಸಿದ್ಧದಶೆಯಲ್ಲಿ 'ಅತ್ಯಾಶ್ರಮಿ' ಗಳು ಎಂಬಲ್ಲಿ ಮೀರಿದ ಆಶ್ರಮಿಗಳೆಂದೂ, ಅತಿವರ್ಣಾಶ್ರಮಿ ಗಳೆಂಬಲ್ಲಿ ಮೀರಿದ ವರ್ಣಾಶ್ರಮಿಗಳೆಂದೂ ಅರ್ಥ ಮಾಡಲಿಕ್ಕೆ ಬರುತ್ತಿದೆ

ಶ್ರೀಮರಿತೋಂಟದಾರ್ಯರು— "ಆಶ್ರಮಾಏಷಾಂಸಂತೀತ್ಯತ್ಯಾಶ್ರಮಿಣಃ ಅತಿಶಯಿತಾ ಆಶ್ರಮಿಣಃ ಅತ್ಯಾಶ್ರಮಿಣಃ ಇತ್ಯಧ್ಯವರ್ಣನಯಾ ಅತ್ಯಾಶ್ರಮಿತ್ವಸ್ಯ ವೀರಶೈವೇಷು ಸಂಭವಾತ್" ಇತ್ಯಾದಿ ಪಂಕ್ತಿಗಳಿಂದ ಅತಿಶಯಿತವಾದ ಆಶ್ರಮಿಗಳು ಅತ್ಯಾಶ್ರಮಿಗಳೆಂದು "ವೀರಶೈವಾನಂದ ಚಂದ್ರಿಕೆ" ಯ ೪೫೨ನೆಯ ಪುಟದಲ್ಲಿ ಅಪ್ಪಣೆಕೊಡಿಸಿದ್ದಾರೆ

ಇದರಿಂದ ಸಾಧಕದಶೆಯಲ್ಲಿದ್ದ 'ಶ್ರೌತ' ರಿಗೆ ಪೂಜ್ಯವಾದ ಆಶ್ರಮಗಳುಂಟೆಂದೂ, ವರ್ಣಗಳಿಲ್ಲದೆ ಆಶ್ರಮಗಳು ಅಪ್ರಸಿದ್ಧವಾದುದರಿಂದ ಅತಿಶಯಿತವಾದ ವರ್ಣಗಳುಂಟೆಂಬುದೂ ತಾತ್ಪರ್ಯವಾಗುತ್ತಿದೆ ಅಂತಹ ವರ್ಣಗಳೆಂಬ ಬಗ್ಗೆ ಈ ಹಿಂದೆಯೇ ಕಂಠೋಕ್ತಿಯೇ ತೋರಿಸಲ್ಪಟ್ಟಿದೆ

ಸಿದ್ಧದಶೆಯಲ್ಲಿಯಂತೂ ಮೇಲೆ ತೋರಿಸಿದಂತೆ ವರ್ಣಾಶ್ರಮ ತ್ಯಾಗವು ಹೇಳಲ್ಪಡುವುದರಿಂದ ಅತಿಕ್ರಮಿಸಿದ ವರ್ಣಾಶ್ರಮಗಳುಳ್ಳವರೆಂದೂ ಸಿದ್ಧವಾಗುತ್ತಿದೆ ಇಂತಹ ಸಾಧಕ ಮತ್ತು ಸಿದ್ಧದಶೆಗಳಿಗೆ ನಮ್ಮ ಶಿವಶರಣರು 'ಮಾರ್ಗಕ್ರಿಯೆ' 'ಮೀರಿದಕ್ರಿಯೆ' ಗಳೆಂದು ತಮ್ಮ ವಚನಗಳಲ್ಲಿ ಉದ್ಘೋಷಿಸಿರುವರು

ಈ ಕಾರಣದ ದೆಸೆಯಿಂದ ಸಿದ್ಧ-ಸಾಧಕೋಭಯ ಸಾಧಾರಣ್ಯವಾಗಿ ಗಣ್ಯವಾಗಿ 'ಅತ್ಯಾಶ್ರಮ' 'ಅತಿವರ್ಣಾಶ್ರಮ' ಪದಗಳು ಅನ್ವಯಿಸುವಲ್ಲಿ ವೀರಶೈವರು 'ಅತ್ಯಾಶ್ರಮಿಗಳು' ಅಥವಾ 'ಅತಿವರ್ಣಾಶ್ರಮಿಗಳು' ಎಂದೇ ಶಿವಾಗಮಸಿದ್ಧ ನಿರ್ಣಯವಕ್ಕುಂ

# ತಾಂತ್ರಿಕ ವೈದಿಕ ವೀರಶೈವ

ಲಿಂಗಾಂಗ ಸಾಮರಸ್ಯದ ತತ್ವವೇತ್ತರು ವೀರಶೈವದ ಘನತೆಯನ್ನು ಸಾರುವಾಗ ಇದು "ತಾಂತ್ರಿಕ ವೈದಿಕ ವೀರಶೈವ" ವೆಂದು ಏಕಕಾಲದಲ್ಲಿ ಯೇ ನುಡಿಯುವರು ಇದು ರೂಢಿಯಲ್ಲಿಯೂ ಇರುವದು ಮತ್ತು ಶಾಸ್ತ್ರದಲ್ಲಿಯೂ ಇದೆ ಇದರ ಮೇಲಿಂದ ವಿಮರ್ಶಿಸುತ್ತ ಹೋದಲ್ಲಿ ಇದು ನಿಜವೆಂಬುದು ಸಹಜವಾಗುತ್ತಿದೆ ಹೇಗೆಂದರೆ, ಕಾಮಿಕಾದಿ ವಾತುಲಾಂತ ಶಿವಾಗಮಕ್ಕೆ 'ತಂತ್ರ' ವೆಂಬುದು ಅದರೆನಾಮವು ವೀರಶೈವವು ತಂತ್ರ ಗಳಿಂದಲೇ ಉಗಮಗೊಂಡಿರುವುದರಿಂದ ತಾಂತ್ರಿಕರೆಂದು ಗಣಿಸಲ್ಪಡು ತ್ತಿದೆ ಆದರೆ ವೇದಬಾಹ್ಯವಾದ ಕಾಪಾಲಾದಿ ತಂತ್ರಗಳಿಂದ ಉಗಮ ಗೊಂಡ 'ತಾಂತ್ರಿಕ' ವಲ್ಲರೆಂದು ತೋರ್ಪಡಿಸಲು "ತಾಂತ್ರಿಕ ವೈದಿಕ ವೀರಶೈವ" ವೆಂದು ಹೇಳಲ್ಪಡುತ್ತಿದೆ ಇದರ ರೂಢಿಯ ಬಗ್ಗೆ—

ಕೀರ್ತನಕೇಸರಿ ಕವಿರತ್ನ ಬಿ ಶಿವಮೂರ್ತಿಶಾಸ್ತ್ರಿ ಹುಲ್ಕುಂಟೆಮಠ ತುಮಕೂರು ಇವರು 'ಶಿವಾನುಭವ' ಮಾಸಿಕದ ವರ್ಷ ೧೧, ಸಂಚಿಕೆ ೬ ರಲ್ಲಿ "ಶ್ರೀ ಹಾನಗಲ್ಲ ಶಿವಯೋಗಿಗಳೂ, ಲಿಂಗವಂತ ಸಂಸ್ಕೃತಿಯೂ" ಎಂಬ ತಮ್ಮ ಲೇಖದಲ್ಲಿ—

"ಸನಾತನ ಧರ್ಮದಲ್ಲಿ ವೈದಿಕ, ತಾಂತ್ರಿಕ, ವೈದಿಕತಾಂತ್ರಿಕ, ತಾಂತ್ರಿಕವೈದಿಕ, ಎಂಬ ನಾಲ್ಕು ಆಸ್ತಿಕ ಮತಗಳಿರುವವು ಇವುಗಳಲ್ಲಿ ವೀರಶೈವವು 'ತಾಂತ್ರಿಕ ವೈದಿಕ'ವೆಂದು ವಿದ್ವಾಂಸರು ಹೇಳಿದ್ದಾರೆ ವೇದ ವನ್ನು ಮಾತ್ರ ನಂಬುವವರು ವೈದಿಕರೆಂದೂ, ಆಗಮಗಳನ್ನು ಮಾತ್ರ ನಂಬತಕ್ಕವರು 'ತಾಂತ್ರಿಕ'ರೆಂದೂ, ವೇದವನ್ನು ಮುಖ್ಯವಾಗಿಯೂ ಆಗ ಮಗಳನ್ನು ಗೌಣವಾಗಿಯೂ ನಂಬತಕ್ಕವರು ವೈದಿಕ ತಾಂತ್ರಿಕರೆಂದೂ, ಆಗಮಗಳನ್ನು ಮುಖ್ಯವಾಗಿಯೂ ವೇದವನ್ನು ಗೌಣವಾಗಿಯೂ ನಂಬ ತಕ್ಕವರು 'ತಾಂತ್ರಿಕವೈದಿಕ'ರೆಂಬುದಾಗಿಯೂ ಕರೆಯಲ್ಪಡುತ್ತಾರೆ ಇವೆರ ಡನ್ನು ನಂಬದವರು ನಾಸ್ತಿಕರೆನಿಸಿದ್ದಾರೆ" ಎಂಬುದಾಗಿ ಹೇಳಿದ್ದಾರೆ

ವೇ|| ಎನ್ ಆರ್ ಕರಿಬಸವಶಾಸ್ತ್ರಿಗಳು ಆಸ್ಥಾನ್‌ವಿದ್ವಾನ್‌ಇವರು 'ಸಿದ್ಧಾಂತ ಶಿಖಾಮಣಿ'ಗೆ 'ತಾತ್ಪರ್ಯದೀಪಿಕೆ'ಯೆಂಬ 'ಟಿಪ್ಪಣಿ'ವನ್ನು ಬರೆದುದು ವಿಖ್ಯಾತವೇ ಆಗಿದೆ ಇವರು ಇದರ ಪ್ರಸ್ತಾವನೆಯಲ್ಲಿ—

" ಹೀಗೆ ತಾಂತ್ರಿಕ ವೈದಿಕೋಭಯ ಸಿದ್ಧಗಳಾದ ಧರ್ಮಗಳನ್ನು ವೀರಶೈವ ಮತವು ಅವಲಂಬಿಸಿರುವುದರಿಂದ ಇದು 'ತಾಂತ್ರಿಕವೈದಿಕ' ಮತವೆನಿಸಿಕೊಂಡಿರುವುದು " ಎಂದು ಒರೆದಿರುವರು

ಮತ್ತು— 'ಕೈವಲ್ಯೋಪನಿಷತ್‌ಸಾದಾಶಿವ ಭಾಷ್ಯ'ದ ಸಂಸ್ಕೃತ ಪ್ರಸ್ತಾವನೆಯಲ್ಲಿ-- " ಶಕ್ತಿವಿಶಿಷ್ಟಾದ್ವೈತಬೋಧಕಂ ವೀರಶೈವಮತಂ ಶೈವಮತಾಂತರ್ಗತಮಪಿ ಸಮಸ್ತ ಶೈವಮತೋತ್ತಮಂ 'ತಾಂತ್ರಿಕವೈದಿಕ ಮಿತಿಪ್ರಸಿದ್ಧಂ, [ ಶಕ್ತಿವಿಶಿಷ್ಟಾ ದ್ವೈತವನ್ನು ಬೋಧಿಸುವ ವೀರಶೈವ ಮತವು ಶೈವಾಂತರ್ಗತವಾದರೂ ಶೈವಮತೋತ್ತಮವಾಗಿ 'ತಾಂತ್ರಿಕ-ವೈದಿಕ'ವೆಂಬುದಾಗಿ ಪ್ರಸಿದ್ಧವಿದೆ ] ಎಂದು ಹೇಳಲ್ಪಟ್ಟಿದೆ

ಇನ್ನು ಶಾಸ್ತ್ರದ ಬಗ್ಗೆ—

ವೀರಶೈವಮತಭಾಷ್ಯಕಾರಿಕೆಯಲ್ಲಿ—

'ತಾಂತ್ರಿಕಂ ವೇದವಿಹಿತಂ ವೀರಶೈವ ಮುದಾಹೃತಂ '

ಎಂಬುದಾಗಿ ಇದೆ (ಉ ೪ ಪು ೧೩೨–೧೩೧)

ಇದರಿಂದ 'ತಾಂತ್ರಿಕ ವೈದಿಕ ವೀರಶೈವ'ವೆಂಬುದು ವ್ಯಕ್ತವಾಗಿದೆ

ಮತ್ತು ಅದೇ ಕಾರಿಕೆಯಲ್ಲಿ—

"ಉಭಯಾರ್ಹೋ ವೀರಶೈವಸ್ತಾಂತ್ರಿಕೋ ವೈದಿಕೋತ್ತಮಃ "

(ಉ ೪ ಪು ೧೩೧)

ತಂತ್ರ ಮತ್ತು ವೇದ ಪ್ರತಿಪಾದಿತ ಉಭಯ ಧರ್ಮಗಳಿಗೂ ಅರ್ಹವಾದುದರಿಂದ 'ತಾಂತ್ರಿಕ ವೈದಿಕೋತ್ತಮ ವೀರಶೈವ'ನೆಂಬುದು ಸಿದ್ಧವು ಎಂದೂ ನಿರೂಪಿತವಾಗಿದೆ ಈ ಬಗೆಯಾಗಿ ರೂಢಿಯಿಂದಲೂ, ಶಾಸ್ತ್ರಪದ್ಧತಿ-ಯಿಂದಲೂ 'ತಾಂತ್ರಿಕ ವೈದಿಕ ವೀರಶೈವ'ವೆಂಬುದೇ ಸಹಜಾರ್ಥವುಳ್ಳ

# ಇನ್ನಿತರ ಶಿವಾಗಮ ಪ್ರಮಾಣ

ಇಂತು "ಚಂದ್ರಜ್ಞಾನಾಗಮ" ಪ್ರಮಾಣವನ್ನು ವಿಮರ್ಶಿಸಲಾಗಿ 'ಶ್ರೌತ' 'ಸ್ವತಂತ್ರ' ಧರ್ಮವಿಚಾರ ಸಂದರ್ಭಕ್ಕೆ ಕ್ರಮಪ್ರಾಪ್ತವಾದು ದಾಗಿ ಇದುವರೆಗೂ ಪರಿಶೀಲಿಸಿದಂತಾಯಿತು. ಇದೇ ಬಗೆಯಿಂದ ವೀರಶೈವ ದ್ವೈವಿಧ್ಯವು "ಸೂಕ್ಷ್ಮಾಗಮ" ಪ್ರಮಾಣದಿಂದಲೂ ತಿಳಿದುದಾಯ್ತು ಹೀಗೆ ಶಿವಾಗಮದಲ್ಲಿ ಮತ್ತಿನ್ನೆಲ್ಲಿಯಾದರೂ ಈ ಬಗ್ಗೆ ಪ್ರಮಾಣವುಂಟೋ? ಎಂದು ಕೇಳಿದಲ್ಲಿ ಕ್ರಿ ಶ ೧೧೬೦ ರಲ್ಲಿದ್ದ ಶ್ರೀಪತಿ ಪಂಡಿತಾರಾಧ್ಯ ವಿರಚಿತ ಶ್ರೀಕರಭಾಷ್ಯದ ೪೨೧ ನಯ ಪುಟದಲ್ಲಿ ಉದಾಹೃತ ಶಿವಾಗಮವು ಉತ್ತರ ನೀಯುತ್ತದೆ ಹೇಗೆಂದರೆ—

> ನಿಗಮಾಗಮಸಂಧಾನ ಶೈವದೀಕ್ಷಾ ವಿಧಾನತಃ ||
> ಶಿವಲಿಂಗಂಕರೇಕಂಠೇ ಧೃತ್ವಾವಕ್ಷಃಸ್ಥಲೇಪಿವಾ ||
> ತ್ರಿಸಂಧ್ಯಂಯೋರ್ಚಯೇದ್ ಭಕ್ತ್ಯಾಮಹಾಪಾಶುಪತೋಹಿಸಃ||
> **ಶ್ರೌತಾ-ಶ್ರೌತ** ವಿಭೇದೇನತದ್ದ್ವಿಧಾ ಪರಿಚಕ್ಷತೇ ||
> ವರ್ಣಾಶ್ರಮೋಚಿತಂ ಧರ್ಮಂ ವೇದಮಾರ್ಗಾವಿರೋಧತಃ ||
> ಕೃತ್ವಾರ್ಚಯತಿ ಯಶ್ಶಂಭುಂ **ಶ್ರೌತ ಶೈವಸ್ಸ** ಉಚ್ಯತೇ ||
> ವರ್ಣಾಶ್ರಮೋಚಿತಂ ಧರ್ಮಂತ್ಯಕ್ತ್ವಾ ತಾಂತ್ರಿಕಮಾರ್ಗತಃ ||
> ಯಃಪೂಜಯತಿವಿಶ್ವೇಶಂ **ತಂತ್ರಶೈವಸ್ಸ** ಉಚ್ಯತೇ ||

ನಿಗಮಾಗಮ ಸಂಧಾನಾತ್ಮಕವಾದ ಶಿವದೀಕ್ಷೆಯ ವಿಧಾನದಿಂದ ಶಿವಲಿಂಗ ವನ್ನು ಕರದಲ್ಲಿ ಕಂಠದಲ್ಲಿ ಅಥವಾ ವಕ್ಷಸ್ಥಲದಲ್ಲಿ ಧರಿಸಿ, ಸಂಧ್ಯಾತ್ರಯ ದಲ್ಲಿಯೂ ಸಮರ್ಚಿಸುವನಾವನೋ ಅಂತಹ ವೀರಶೈವನು ಮಹಾಪಾಶು ಪತನು ಈ ವೀರಶೈವವು **ಶ್ರೌತ ಅಶ್ರೌತ (ಸ್ವತಂತ್ರ)** ವೆಂದು ಎರಡು ತೆರನಾಗಿದೆ ವರ್ಣಾಶ್ರಮೋಚಿತ ಧರ್ಮವನ್ನು ವೇದಮಾರ್ಗಕ್ಕೆ ಅವಿ ರೋಧವಾಗಿ ಯಾವನು ಶಂಭುವನ್ನು ಪೂಜಿಸುವನೋ ಅವನು "**ಶ್ರೌತ ಶೈವ**" ನೆಂದು ಹೇಳಿಸಿಕೊಳ್ಳುತ್ತಾನೆ ವರ್ಣಾಶ್ರಮೋಚಿತ ಧರ್ಮವನ್ನು

ಬಿಟ್ಟು ತಾಂತ್ರಿಕ ಮಾರ್ಗದಿಂದ ಯಾವನು ವಿಶ್ವೇಶ್ವರನ (ಲಿಂಗವ) ನ್ನು ಪೂಜಿಸುತ್ತಾನೋ ಅವನು **"ತಂತ್ರಶೈವ"** ನೆಂದು ಹೇಳಿಸಿಕೊಳ್ಳುತ್ತಾನೆ

ಇದರಿಂದಲೂ ವರ್ಣಾಶ್ರಮದಿಂದ ಬದ್ಧವಾದ ಮತ್ತು ವರ್ಣಾಶ್ರಮರ ಹಿತನಾದ ಎರಡು ತೆರನಾದ ವೀರಶೈವದಲ್ಲಿ "ಸ್ವತಂತ್ರ" ಧರ್ಮವು ನಾರಲ್ಪಟ್ಟಿದೆ ಇದೇ ರೀತಿಯಿಂದ ಕಾರಣಾಗಮವು—

ವೈದಿಕಂತಾಂತ್ರಿಕಂಚೇತಿವ್ರತಮೇತದ್ವಿಧಾಭವೇತ್ ||
ದ್ವಿಜಾನಾಂ **ವೈದಿಕಂ** ಪ್ರೋಕ್ತಮನ್ಯೇಷಾಂ **ತಾಂತ್ರಿಕಂ** ಸ್ಮೃತಂ
(ಕಾ ಆ ವ ೩ ಶ್ಲೋ ೩೫)

ಈಶಾಂಭವವ್ರತವೆನಿಸಿದ ವೀರಶೈವವು **ವೈದಿಕ ತಾಂತ್ರಿಕ (ಸ್ವತಂತ್ರ)** ವೆಂದು ಎರಡುವಿಧವಾಗಿದೆ ದ್ವಿಜರಿಗೆ ಹೇಳಿದುದು ವೈದಿಕ (ಶ್ರೌತ)ವು ಅನ್ಯರಿಗೆ ಹೇಳಿದುದು ತಾಂತ್ರಿಕ (ಸ್ವತಂತ್ರ)ವು ಎಂದು ಸ್ಮರಿಸಲ್ಪಟ್ಟಿದೆ

ಈ ಕಾರಣಾಗಮ ಪ್ರಮಾಣದಿಂದಲೂ, ಮೇಲುದಾಹರಿಸಿದ ವರ್ಣಾಶ್ರಮಸಹಿತ ತದ್ರಹಿತವಿಭಾಗವುಳ್ಳುದಾಗಿ ವೀರಶೈವವು ಹೇಳಲ್ಪಟ್ಟು, ವರ್ಣಾಶ್ರಮಿಗಳಾದ ವೀರಶೈವ, ಬ್ರಾಹ್ಮಣ, ಕ್ಷತ್ರಿಯ ವೈಶ್ಯರಾದ ದ್ವಿಜರಿಗೇನೇ 'ವೈದಿಕತ್ವವು ವಿಹಿತವಾಗಿ ಉಳಿದವರಿಗ 'ತಾಂತ್ರಿಕತ್ವವು ಎಂದರೆ ಸ್ವತಂತ್ರಧರ್ಮವು ಅಭಿಹಿತವಾಗಿದೆ

## ವೀರಶೈವದಲ್ಲಿ ಶೂದ್ರತೆಗೆ ಇಂಬಿಲ್ಲ

ಇಲ್ಲಿ 'ವೈದಿಕ'ಪದದಿಂದ ವೀರಶೈವರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂದು, ಅಪ್ರಾಕೃತವರ್ಣಗಳು ಹೇಳಲ್ಪಟ್ಟಂತೆ, ಅಪ್ರಾಕೃತ ಶೂದ್ರರಾರು ? ಎಂದು ಪ್ರಶ್ನಮಾಡಿದರೆ— ಸಲ್ಲದು. ವೀರಶೈವ ಶಾಸ್ತ್ರದಲ್ಲಿ ಶೂದ್ರತೆಗೆಯಿಂಬಿಲ್ಲ ಅದೇನು ಕಾರಣವೆಂದರೆ— ವೀರಶೈವ ದೀಕ್ಷಿತರಾದ ಶೂದ್ರ ಮೊದಲಾದವರಿಗೆ 'ಶೂದ್ರಾದಿಃ ಶಿವತಾಂವ್ರಜೇತ್' ಶೂದ್ರವರ್ಣ ಮೊದಲಾದುದು ಶಿವತ್ವವನೆಯ್ದುವುದು ಎಂದು ಸೂಕ್ಷ್ಮಾಗಮವು ಸಿಂಹನಾದಗೊಳಿಸುತ್ತಿದೆ

ಇಲ್ಲಿ 'ಶೂದ್ರಾದಿಃ ಶಿವತಾಂವ್ರಜೇತ್, ಎಂಬೀ ಸೂಕ್ಷ್ಮಾಗಮ ಶಿವ-ವಚನದಲ್ಲಿ-- ಆದಿ ಪದದಿಂದ ಅಪ್ರಾಕೃತ ಶೂದ್ರರನ್ನಾರಂಭಿಸಿ ಪ್ರಾಕೃತ ವರ್ಣ ಉಪವರ್ಣ- ಕುಲಮುಂತಾದ ನಿಖಿಲಲೋಕದ 'ಜಾತಿ'ಯು ಉಪ ಲಕ್ಷಿತವಾಗಿದೆ ಯಾದುದರಿಂದ ದೀಕ್ಷೆಯಿಂದ ಇವರೆಲ್ಲರ ವರ್ಣಜಾತಿ-ಮೊದಲಾದುದು ಹೇಳಹೆಸರಿಲ್ಲದಂತೆ ನಿರ್ನಾಮವಾಗುವುದೆಂದು ತಾತ್ಪರ್ಯವು

ಒಂದುವೇಳೆ ಶಾಸ್ತ್ರವಿಚಾರದಲ್ಲಿ- ಕ್ಷಣಹೊತ್ತು ಅಪ್ರಾಕೃತ ಶೂದ್ರ ಪದವನ್ನು ಹಿಡಿಯಬಹುದೆಂದರೂ, ಆ ಶೂದ್ರಪದವಾಚ್ಯನು ಕೂಡ ಮೇಲ್ಕಂಡ ಕಾರಣಾಗಮ ವಚನದಂತೆ- ' ತಾಂತ್ರಿಕ 'ನೆಂದು ಸಾರಲ್ಪಡು ವನು 'ವಂಶಾವಲಿಪ್ರಯಾತಾನಾಂ ಲಿಂಗಧಾರಣಶಾಲಿನಾಂ || ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂನೈವವಿದ್ಯತೆ ' ಎಂದು ಗರುಡ ಪುರಾಣದಲ್ಲಿ- ಗುರುಕಾರುಣ್ಯದಿಂದ ಲಿಂಗಧಾರಣಶಾಲಿಗಳಾದ ಭಕ್ತರು,'ಶೂದ್ರ'ರಿದ್ದರೂ ಅವರಿಗೆ 'ಶೂದ್ರತ್ವ'ವಿಲ್ಲವೆಂಬ ಅಭಿಪ್ರಾಯವು, ಕಾಣಬರತ್ತಿದೆ

ವೀರಶೈವ ಧರ್ಮಶಿರೋಮಣಿಯ ೧೪೨ ಪುಟದಲ್ಲಿ-"ಬ್ರಾಹ್ಮಣಾದಿ ವರ್ಣಾನಾಮತ್ರನ್ಮತ ಪ್ರವಿಷ್ಟಾನಾಂ ವರ್ಣಭೇದೋನಾಸ್ತೀತಿ ಪ್ರತೀ-ಯತೇ। ವೀರಶೈವ ಮತಪ್ರವಿಷ್ಟರಾದ ಪ್ರಾಕೃತಬ್ರಾಹ್ಮಣಾದಿ ವರ್ಣಗಳ ವರ್ಣಭೇದವು ಇಲ್ಲವಾಗುತ್ತಿದೆಯೆಂದು ತಿಳಿಯಲ್ಪಡುತ್ತಿದೆ " ಎಂದು ಹೇಳಿದೆ ಆದುದರಿಂದಲೇ ಸೂಕ್ಷ್ಮಾಗಮದಲ್ಲಿ ಶಿವವಚನವು—

" ಭಕ್ತಸ್ಯಪ್ರಾಕ್ತನಂ ಜನ್ಮನಾಮ ಜಾತ್ಯಾದಿಕಂಚಯತ್ ||
ಪೃಚ್ಛೇದ್ವಾಕಥಯೇದ್ವಾಪಿ ಸರ್ವೆಪಾತಕಿನಾಂಪರಃ ||

ಶಿವದೀಕ್ಷಿತನಾದ ಭಕ್ತನ ಪ್ರಾಕ್ತನವಾದ ಜನ್ಮ-ನಾಮ ಜಾತಿ ಮೊದಲಾದು ದನ್ನು ಪ್ರಶ್ನಿಸುವವನು ಮತ್ತು ಅವುಗಳನ್ನು ಹೇಳುವವನು, ಪಾಪಿಗಳ ಮಧ್ಯದಲ್ಲಿ ಅಗ್ರಗಣ್ಯನಾಗುವನು" ಎಂದು ಜಾಗರೂಕವಾಗಿದೆ ಅದು ಕಾರಣ ಅಪ್ರಾಕೃತರಲ್ಲಿ- ಬ್ರಾಹ್ಮಣ- ಕ್ಷತ್ರಿಯ ವೈಶ್ಯರೆಂಬ ಮೂರು ವರ್ಣಗಳೇ ' ಶ್ರೌತ ' ವರ್ಗಪರಿತವಾಗಿವೆಯಲ್ಲದೆ, ಇತರ ವರ್ಣಗಳು

ಉಂಟೆಂದು ಹೇಳುವಲ್ಲಿ ಬಹುಗೊಂದಲವಾಗಿ ಸಂಕೀರ್ಣತೆಯುಂಟಾಗ-ಬಹುದೆಂದೇ ನಿಶ್ಚಯಿಸಿ ನಿರ್ದೇಶಿಸಿದ ಮೇಲ್ಕಂಡ ಶಿವವಚನವಿಲ್ಲಿ 'ಅನ್ಯೇ-ಷಾ' ಎಂದು 'ಅನ್ಯ'ಪದವನ್ನೇ ನಿರೂಪಿಸಿರುವುದಲ್ಲದೆ, ಶೂದ್ರಮೊದಲಾದ ಪದಗಳನ್ನು ವಿವರಿಸಿಲ್ಲ ಮತ್ತು ವರ್ಣಾಶ್ರಮಿಯ ಧರ್ಮಾಢ್ಯವಾದುದು "ಶ್ರೌತವು" ತದೀಯ ಧರ್ಮರಹಿತವಾದುದು, 'ಸ್ವತಂತ್ರ' ವೆಂಬುದೂ ಈ ಮೊದಲೇ ಉದಾಹರಿಸಿದ ಶಿವವಚನಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತಿದೆ ಅದುಕಾರಣ ವೀರಶೈವದಲ್ಲಿ 'ಶೂದ್ರತೆ' ಗೆ ಇಂಬಿಲ್ಲವೆಂದೇ ಆಗಮಸಿದ್ಧ ನಿರ್ಣಯವಕ್ಕುಂ

## ಕನ್ನಡ ಸಾಹಿತ್ಯನುವಾದ

ಇನ್ನು, ಮೇಲ್ಕಂಡ ಶ್ರೌತ ಸ್ವತಂತ್ರಾತ್ಮಕವಾದ ಈ ಅಭಿಪ್ರಾ-ಯವು ಕೇವಲ ಶಿವಾಗಮಗಳಲ್ಲಿ ಹೇಳಲ್ಪಟ್ಟಿದ್ದು, ಇದನ್ನು ವೀರಶೈವ-ಪ್ರಸಿದ್ಧ ಕವಿಗಳಾರಾದರೂ ತಮ್ಮ ಕರ್ನಾಟಕ ಸಾಹಿತ್ಯದಲ್ಲೆಲ್ಲಿಯಾದರೂ ಅನುವಾದ ರೂಪೇಣ ಪರಿವರ್ತಿಸಿರುವರೋ ? ಎಂದು ಕೇಳಿದರೆ ಇದಕ್ಕುತ್ತರವು 'ವೀರಶೈವಾಮೃತ ಮಹಾಪುರಾಣ'ದಲ್ಲಿ ಮಂಡಿತವಾಗಿದೆ

ಇದನ್ನು ಗುಬ್ಬಿಯ ಮಲ್ಲಣಾರ್ಯನು ಕ್ರಿ ಶ. ೧೫೫೦ರಲ್ಲಿ ರಚಿಸಿ-ದ್ದಾನೆ ಇದು ವೀರಶೈವರಲ್ಲಿ ಕನ್ನಡ ಭಾಷೆಯ ಮಹತ್ವದ ಗ್ರಂಥವೆಂದು ಎಲ್ಲರೂ ಒಪ್ಪುತ್ತಾರೆ 'ಶಿವಾನುಭವ' ಮಾಸಿಕದ ೩೫ನೆಯ ಸಂಪುಟದ ೫ನೆಯ ಸಂಚಿಕೆಯಲ್ಲಿ ಮೇಲ್ಕಂಡ ವೀರಶೈವಾಮೃತ ಮಹಾಪುರಾಣವು—

"ಇದು ವೀರಶೈವ ಧರ್ಮದ 'ಎನ್‌ಸೈಕ್ಲೋಪಿಡಿಯೋ'
ಅಂದರೆ 'ಜ್ಞಾನಕೋಶ'

ವೆಂದು ಮನ್ನಣೆಯನ್ನು ಪಡೆದಿದೆ ಇಂತಹ 'ವೀರಶೈವಾಮೃತ ಮಹಾಪುರಾಣ'ದಲ್ಲಿ—

ಸಾರ್ವದಾ ವೀರಶೈವಾರ್ಥಮಿನ್ನೆರಡಲಾ ।
ಖರ್ವದಿಂ ಶ್ರೌತನೆಂದ ಶ್ರೌತಪೆಂದವಂ ॥
ನಿರ್ವಿಕಾರನೆ ತದು ಭಯಾರ್ಥಮಂ ಬಿತ್ತರಿಪೆನೆಂದನಾಚಾರ್ಯ
ಮೂರ್ತಿ ॥೩೮॥

ಶ್ರುತಿಸಾರಮಯವಲಾ ಶೈವಂ ಸ್ವತಂತ್ರ ।
ಮಿತಿರತ್‌ಸ್ಮೃತಂ ಯತೋವಾಚೋನಿವರ್ತಂತೇ ।
ಮತಿಯೊಳಪ್ರಾಪ್ಯಮನನೀತಿತಚ್ಛ್ರುತಿಲಸಚ್ಛ್ರುತಿಯಮಿರುತ-
ವರ್ತಿಗ ॥

ಸ್ಥಿತಿಯನ ಶ್ರೌತಾಖ್ಯ ವೀರಶೈವಂ ಕಣಾ ।
ಸುತನೆಯಾಶ್ರೌತಾಖ್ಯ ವೀರಶೈವಂ ನನು ।
ನ್ನತಿಯೊಳಾಚರಣೆಯಿಂಧಧಿಕವಾಶ್ರೌತವೆ ತಾನುನ್ನುದ್ಧೈಕುಮಾರ
॥೩೯॥

(ವೀ ಶೈ ಆ ಮ ಪು ಕಾಂ ೭ ಸಂ ೨)

ಎಂದು ಹೇಳಿದೆ

ಇಲ್ಲಿ ಗುಬ್ಬಿಯ ಮಲ್ಲಣ್ಣನು ವೀರಶೈವ ವಿಭಾಗವನ್ನು 'ವೀರಾಗಮ' ವೆಂಬ 'ಶಿವಾಗಮ' ಪ್ರಮಾಣದ ಅನುವಾದಾತ್ಮಕವಾಗಿ ಶ್ರೌತ ಸ್ವತಂತ್ರ ಪದಗಳಿಂದ ಸಾರಿದ್ದರೂ ತಾನು 'ವೀರಶೈವಾರ್ಥ ಮಿನ್ನೆರಡಲಾ' ಎಂದು ನುಡಿವಾಗ 'ವೀರಶೈವ'ವು ಒಂದೇ ಇದ್ದರೂ ಅರ್ಥವು ಎರಡು ಎಂದು ಹೇಳಿ ಒಂದು ನಾಣ್ಯದ ಎರಡು ಮಗ್ಗಲುಗಳಂತೆ ಬಹು ಸುಂದರವಾಗಿ ಚಿತ್ರಿಸಿರುವನು

ಇದೇ ಪುರಾಣದ ಇದೇ ಕಾಂಡದ ಇದೇ ಸಂಧಿಯ (೩೭) ನೆಯ ಪದ್ಯದಲ್ಲಿ 'ಇದು ವಾಯವೀಯ ಸಂಹಿತೆಯರ್ಥದಿಂಪೇಳ್ವೆಪನಲಾ, ಎಂದು ಹೇಳಿ, 'ತದ್ವೀರತಂತ್ರದರ್ಥದೊಳು ಪೇಳಿದಪುದಾ ವೀರಶೈವ ಕ್ರಮ ದೆ ಎಂದು ವೀರಾಗಮದ ಅನುವಾದವು ಮಾಡಲ್ಪಟ್ಟಂತೆ ಸ್ಪಷ್ಟವಾಗಿ ನಿರ್ದೇಶಿಸಲ್ಪಟ್ಟಿದೆ

ಇದರಿಂದ ಮೇಲ್ಕಂಡ ಚಂದ್ರಜ್ಞಾನಾಗಮ– ಸೂಕ್ಷ್ಮಾಗಮ– ಕ್ರಿಯಾ ಸಾರ– ಶ್ರೀ ಕರಭಾಷ್ಯೋದಾಹುತ ಶಿವಾಗಮ ಕಾರಣಾಗಮ– ವೀರಶೈವಾ ಮೃತ ಪುರಾಣಗೋದಾಹೃತ ವೀರಾಗಮಗಳನ್ನು ಪರಿಶೀಲಿಸಿದರೆ ಭಿನ್ನಾ- ಪ್ರಾಯವಿಲ್ಲದೆ ಏಕ-ವಾಕ್ಯತೆಯೇ ಒಡದು ಕಾಣುವುದರಿಂದ 'ಶ್ರೌತ' 'ಸ್ವತಂತ್ರ' ಭೇದವುಳ್ಳುದೆಂದು ಸಿದ್ಧವಾಗುತ್ತಿದ್ದು, ಇಂತಹ ಶಿವಾಗಮ ನಿರೂಪಿತವಾದುದೇ ವೀರಶೈವವೆಂದು ಸಿದ್ಧಿಲಸಲ್ವೇಳ್ಕುಮಪು ಕಾರಣ- ವಾಗಿ ವೀರಶೈವದೋಳ್ 'ಸ್ವಾತಂತ್ರ್ಯದ ಅನಾದಿತ್ವ'ವೆಂಬುದು ನಿರ್ವಿವಾದ ಸಿದ್ಧಮಕ್ಕು

## ವೀರಶೈವ ದ್ವೈವಿಧ್ಯದ ಪರ್ಯಾಯ

ವೀರಶೈವದ ದ್ವೈವಿಧ್ಯದಿಂದರಿಯಬಹುದಾದ 'ಸ್ವತಂತ್ರ' ವೀರ ಶೈವವು ಇನ್ನುಳಿದ ವೀರಶೈವ ಸಾಹಿತ್ಯದಲ್ಲಿ ಎಲ್ಲಿಯಾದರೂ ಪರ್ಯಾಯ- ದಿಂದಾದರೂ ಉಲ್ಲಿಖಿತವಾಗಿದೆಯೇ? ಅಹುದು ಹೇಗೆಂದರೆ–

'ಲಿಂಗೋಪನಿಷತ್ತು' ಕ್ರಿ ಶ ೧೯೩೩ರಲ್ಲಿಯೂ ಪ್ರಕಟವಾಗಿದೆ ಅದಕ್ಕೆ ಪ್ರಕಾಶಕರು— ಶ್ರೀ. ಚನ್ನಮಲ್ಲಿಕಾರ್ಜುನರು ಇರುವರು ಈ ಉಪನಿಷತ್ತಿನಲ್ಲಿ—

"ಶ್ರೌತಾಶ್ರೌತೇಷು ಧಾರಣಂ | ವೇದೋಕ್ತವಿಧಿನಾ ಶ್ರೌತಂ |
ಶ್ರುತಿ ರಹಿತಮಶ್ರೌತಂ "

ಶ್ರೌತ– ಮತ್ತು ಅಶ್ರೌತ ಇವರಿಗೆ ಲಿಂಗಧಾರಣವು ಹೇಳಲ್ಪಟ್ಟಿದೆ ವೇದೋ ಕ್ತ-ವಿಧಿಯಿಂದ ಹೇಳಿದುದು ಶ್ರೌತವು | ಆ "ಶ್ರುತಿ" ರಹಿತವಾದುದು 'ಅಶ್ರೌತ' (ಸ್ವತಂತ್ರ)ವೆಂದು ಉಕ್ತವಾಗಿದೆ

ಇದರ ಪ್ರಕಾಶಕರಾದ ಶ್ರೀಚನ್ನಮಲ್ಲಿಕಾರ್ಜುನರವರು ತಮ್ಮ ಕನ್ನಡ ಅಭಿಪ್ರಾಯದಲ್ಲಿ—

'ಶ್ರೌತ' (ವೇದೋಕ್ತಮಾರ್ಗ) 'ಅಶ್ರೌತ' (ವೇದವಲ್ಲದ ಮಾರ್ಗ= ಆಗಮಮಾರ್ಗ?) ಗಳಲ್ಲಿ ಲಿಂಗಧಾರಣವುಂಟು. ವೇದೋಕ್ತ ವಿಧಿಯಿಂತೆ ಮಾಡುವುದು ಶ್ರೌತವೆನಿಸಿಕೊಳ್ಳುವುದು, ಅದಿಲ್ಲದೆ ಮಾಡುವಿಕೆಯು ಅಶ್ರೌತವು ಎಂದು ಅಭಿಪ್ರಾಯಪಟ್ಟಿದ್ದಾರೆ

ಮತ್ತು– "ಶ್ರೌತ-ಅಶ್ರೌತರಲ್ಲಿ ಲಿಂಗಧಾರಣ" ವು "ವೇದೋಕ್ತ ವಿಧಿಯಿಂದ ಶ್ರೌತವು ತದ್ರಹಿತವು ಅಶ್ರೌತವು" ಇಂತೆಂಬ ಲಿಂಗೋಪನಿಷದ್ವಾಕ್ಯಗಳಿಂದಾದರೂ, ಚತುರ್ವರ್ಣಿಗಳಿಗೆ ಲಿಂಗಧಾರಣ ವಿಧಿಯುಂಟಾದರೂ ಶ್ರೌತಸಂಸ್ಕಾರವು ಶ್ರೌತರಿಗೆ ಎಂಟನೆಯ ವರ್ಷದಲ್ಲಿಯೂ ತದಿತರರಾದ ಅಶ್ರೌತ (ಸ್ವತಂತ್ರ) ರಿಗೆ ಸಂಸ್ಕಾರವು ಇತರ ಕಾಲದಲ್ಲಿಯೂ ಎಂಬೀ ಸಂಪ್ರದಾಯವು ಇಲ್ಲಿ ಹೇಳಲ್ಪಟ್ಟಿದೆ ಎಂದು ವೇ|| ಪಂ|| ಧರ್ಮರತ್ನ ಶ್ರೀಶಂಕರಶಾಸ್ತ್ರಿಗಳು ಉಮಚಗಿ ಮಳಿಮಠ ಇವರು ತಮ್ಮ– "ಸಿದ್ಧಾಂತ ಶಿಖೋಪನಿಷದ್ಭಾಷ್ಯ" ದಲ್ಲಿ ತೋರಿಸಿರುವರು ಆ ವಂಕ್ತಿಗಳು ಕೆಳಗೆ ತೋರಿಸಲ್ಪಟ್ಟಿವೆ

"ಶ್ರೌತಾಶ್ರೌತೇಷು ಧಾರಣಂ' 'ವೇದೋಕ್ತ ವಿಧಿನಾಶ್ರೌತಂ ತದ್ರಹಿತಮಶ್ರೌತಂ" ಇತಿ ಲಿಂಗೋಪನಿಷದ್ವಾಕ್ಯೈರಪಿ ಚತುರ್ವರ್ಣಾನಾಂ ಲಿಂಗಧಾರಣ ಸತ್ವೇಪಿ ಗರ್ಭಾಷ್ಟಮವರ್ಷೇ ಶ್ರೌತಸಂಸ್ಕಾರಃ ಶ್ರೌತಾನಾಂ ಕಾಲಾಂತರೇ ಅಶ್ರೌತಸಂಸ್ಕಾರೋಽ ಶ್ರೌತಾನಾಮಿತ್ಯುಕ್ತ ಏವಸಂಪ್ರದಾಯಃ" —ಸಿ ಶಿ ಭಾಷ್ಯ ಪುಟ ೬೦

ಮತ್ತು ಆಸ್ಥಾನ ವಿದ್ವಾಂಸರಾದ ವೇ|| ಪಂ|| ಶಿರಸಿ ಗುರುಶಾಂತ ಶಾಸ್ತ್ರಿಗಳು "ಸಿದ್ಧಾಂತ ಶಿಖೋಪನಿಷದ್ಭಾಷ್ಯ" ದ ತಮ್ಮ ಭಾವಪ್ರಕಾಶದಲ್ಲಿ

"ಅವರವರ ಸಂಪ್ರದಾಯಕ್ಕನುಸಾರವಾಗಿ ದೀಕ್ಷಾಸಂಸ್ಕಾರವನ್ನು ಮಾಡಬೇಕೆಂಬುದು ಲಿಂಗೋಪನಿಷತ್ತಿನಲ್ಲಿಯೂ ಕಂಡುಬರುವದು ನಾಲ್ಕು ವರ್ಣದವರಿಗೆ ಲಿಂಗಧಾರಣ ಸಂಸ್ಕಾರವು ಹೇಳಲ್ಪಟ್ಟಿದ್ದರೂ ಶ್ರೌತಾ ಶ್ರೌತ ಸಂಸ್ಕಾರಗಳನ್ನು ಶ್ರೌತಾ ಶ್ರೌತರಿಗೆ ತಕ್ಕಕಾಲದಲ್ಲಿ ಮಾಡಬೇಕೆಂದು ಹೇಳಿದೆ ಎಂದು ತೋರಿಸಿರುವರು

ಇದರಿಂದ ಲಿಂಗೋಪನಿಷತ್ತು ಅಶ್ರೌತ ಪದದಿಂದ (ಸ್ವತಂತ್ರ) ವೀರಶೈವವನ್ನೇ ಪರ್ಯಾಯವಾಗಿ ಉದ್ಘೋಷಿಸಿದೆಯೆಂಬುದು ಸ್ಪಷ್ಟವಾಗುತ್ತಿದೆ

ಮತ್ತು "ಅನ್ಯೇಷಾಂ ತಾಂತ್ರಿಕಂಸ್ಮೃತಂ" ಎಂಬೀ ಕಾರಣಾಗಮ ವಚನದಂತೆ ಶ್ರೌತರಿಗೆ ಅನ್ಯರಾದ ಮಾನವರು ತಾಂತ್ರಿಕಪದ ಪರ್ಯಾಯವುಳ್ಳ "ಸ್ವತಂತ್ರ" ರಾಗುವ ಪೂರ್ವದಲ್ಲಿ ಆವುದೊಂದು ಜನಾಂಗದಿಂದಾಗಲಿ ಇಲ್ಲವೆ ನಿರ್ದಿಷ್ಟ ಜನರಿಂದಾಗಲೀ ಇಲ್ಲಿ ಪ್ರವೇಶಿಸುವ ಮೊದಲು, ಪರಶಿವಕೃಪೆಯುಂಟಾದಾಗ ಭಕ್ತಿಯುದಯಿಸುವ ಕಾರಣದ ದೆಸೆಯಿಂದ ಸಂಸ್ಕಾರದ ಬಗ್ಗೆ ಶೃತಿನಿಯಮ ಬದ್ಧರಾದ ಶ್ರೌತರಿಗಿದ್ದ ಪಯೋನಿರ್ಬಂಧವು "ಸ್ವತಂತ್ರ" ರಿಗಿಲ್ಲನೆಂದೂ ತಿಳಿಯುತ್ತಿದೆ

ಕಲಿಯುಗದಲ್ಲಿ ವೈದಿಕರಿಂದ ಪರಿಗ್ರಾಹ್ಯವಾದ "ಶ್ರೌತ" ಸನ್ಯಾಸದ ಆಧಿಕ್ಯವನ್ನು ಹೇಳುವಲ್ಲಿ— ಹಾರೀತ-ಶಾತಾತಪ-ಶೌನಕ-ಗೌತಮ-ಪಾರಾಶರ-ದಕ್ಷ ಮೊದಲಾದ ಸ್ಮೃತಿಗಳಲ್ಲಿ- "ಶ್ರೌತ" "ಅಶ್ರೌತ"ವೆಂಬುದಾಗಿ ಹೇಳಲ್ಪಟ್ಟದೆಯೆಂದು ಶ್ರೀಕರಭಾಷ್ಯದ ೪೧೭ ನೆಯ ಪುಟದಲ್ಲಿ ವಿವರಣೆಯಿದೆ

"ಶ್ರೌತಾಽಶ್ರೌತ ವಿಭೇದೇನ ಸನ್ಯಾಸಂ ದ್ವಿವಿಧಂ ಸ್ಮೃತಂ" ಎಂದೂ "ಬ್ರಹ್ಮಕ್ಷತ್ರಿಯ ವೈಶ್ಯಾನಾಂ ಶ್ರೌತಸನ್ಯಾಸ ಇಷ್ಯತೇ" ಮತ್ತು "ವಿಪ್ರಾಣಾಂ ಶ್ರೌತಸನ್ಯಾಸಂ ಕಲೌವ್ಯಾಸೇನಗೀಯತೇ" ಎಂಬುವೇ ಮೊದಲಾದ ಪ್ರಮಾಣಗಳು ಉದಾಹರಿಸಲ್ಪಟ್ಟಿವೆ

ಇಲ್ಲಿ "ಶ್ರೌತ" ಪದಕ್ಕೆ ಇತರವಾದ "ಅಶ್ರೌತ" ಪದವು ಸರ್ವಲೋಕೋಪಕಾರಕವಾದ "ಸ್ವತಂತ್ರ" ವೆಂದೇ ನಿರ್ಣೀತವಾದುದೆಂಬುದನ್ನು ವಾಚಕರು ಮರೆಯಲಾಗದು

ಕ್ರಿ ಶ ೧೬೮೭ ರಲ್ಲಿದ್ದ "ಪಂಡಿತ ಮಲ್ಲಿಕಾರ್ಜುನ" ಕವಿಯು ತನ್ನಿಂದ ವಿರಚಿತವಾದ ಶ್ರೀಶಂಕರ ದಾಸಿಮಾರ್ಯ ಪುರಾಣದಲ್ಲಿ—

ಎಂದಮಾತಂ ಕೇಳಿ ಗುರುವಿಂ |
ತೆಂದ ಶೈವದೊಳೆರಡು ತೆರ ಶ್ರುತ |
ಮೆಂದು ಮಶ್ರುತಮೆಂದು ನೀ ಪೇಳಿದುದೆ ಶ್ರುತಶೈವಂ ||
ಮುಂದೆ ಲಾಲಿಸು ಮಗನೆ ಯಶ್ರುತ |
ದಂದಮಂ ವಿಸ್ತರಿಪೆ ಜ್ಞಾನದೊ |
ಳೊಂದಿಯಶ್ರುತಶೈವ ಮುಕ್ತರಕಾಂಕ್ಷೆಯೆನಿಸುವುದು ||

—ಸಂ ೩, ಶ್ಲೋ ೪೪

ಈ ಪದ್ಯದಲ್ಲಿ "ಶೈವದೊಳೆರಡು ತೆರ ಶ್ರುತಮೆಂದು ಮಶ್ರುತಮೆಂದು ಎಂಬುದಾಗಿ ಹೇಳುವಲ್ಲಿ ಎರಡು ತೆರನಾದ "ಶ್ರುತ" "ಅಶ್ರುತ" ಶೈವಗಳು ಉಕ್ತಗಳಾಗಿವೆ ಮತ್ತು ಜ್ಞಾನದೊಳೊಂದಿಯಶ್ರುತಶೈವ ಎಂಬುದರಿಂದ "ಅಶೃತ" ರು ಜ್ಞಾನದಲ್ಲಿರತಿಯುಳ್ಳವರೆಂಬುದು ಸ್ಪಷ್ಟವಾಗುವುದರಿಂದ ಶೃತರು ಕರ್ಮದಲ್ಲಿ ರತಿಯುಳ್ಳವರೆಂಬುದು ಸಹಜವೇ ಇದೆ ಅದು ಕಾರಣವಾಗಿ "ಶೃತ" "ಅಶೃತ" ಪದಗಳಿಗೆ ಪರ್ಯಾಯವಾಗಿ "ಕರ್ಮ ಯೋಗ" "ಜ್ಞಾನಯೋಗ" ಗಳೆಂದು ಕರೆವುದು ವೀರಶೈವದಲ್ಲಿ ಪ್ರಸಿದ್ಧವೇ ಆಗಿದೆ ಹೇಗೆಂದರೆ, "ವೀರಶೈವ ಧರ್ಮಶಿರೋಮಣಿ" ಯ ೩ನೆಯ ಪರಿಚ್ಛೇದದ ಆರಂಭದಲ್ಲಿ—

"ಪೂರ್ವಂಭಕ್ತಾದಿ ಷಟ್‌ಸ್ಥಲರೂಪಕೋಯಶ್ಶಿವಃ ಸತುದ್ವಿಧಃ ನಿಷ್ಕಲಃ ಸಕಲಶ್ಚೇತಿ | ಇತಿ ನಿಷ್ಕಲ ಶಿವರೂಪಮಭಿದಾಯ ಇತಿ ಸಕಲಂಮಾಹೇಶ್ವರಂ ರೂಪಂಚಾಭಿಹಿತಂ | ತದನುಸಾರೇಣ ಭಕ್ತಾವ ಯೋಪಿದ್ವಿವಿಧಾಃ ವೀರಶೈವಾ ವೀರಮಾಹೇಶ್ವರಾಶ್ಚ | ತತ್ರಜ್ಞಾನಯೋಗ ನಿರತಾವೀರಶೈವಾಃ ಪ್ರಾಣಲಿಂಗಿ-ಶರಣೈಕ್ಯಸಂಜ್ಞತಾಃ ಕರ್ಮಯೋಗ ನಿರತಾಭಕ್ತ ಮಾಹೇಶ್ವರ ಪ್ರಸಾದಿನೋ ವೀರಮಾಹೇಶ್ವರಾಃ"

ಪೂರ್ವದಲ್ಲಿ ಭಕ್ತ—ಮಾಹೇಶ—ಪ್ರಸಾದಿ—ಪ್ರಾಣಲಿಂಗಿ—ಶರಣ— ಐಕ್ಯರೂಪ ಷಟ್‌ಸ್ಥಲಾತ್ಮಕನಾದ ಪರಶಿವನು ನಿಷ್ಕಲನೂ, ಸಕಲನೂ ಎಂದು ಎರಡು ಪ್ರಕಾರವಾಗುವನು ತದನುಸಾರವಾಗಿ ಪೇಳ್ದಂಡ

ಭಕ್ತಾದಿಸ್ಥಲಗಳು ಎರಡು ಪ್ರಕಾರವಾಗಿವೆ ಅಂದರೆ ನಿಷ್ಕಲತತ್ವಾತ್ಮಕ ವೀರಶೈವ ಷಟ್‌ಸ್ಥಲಗಳೆಂದೂ, ಸಕಲತತ್ವಾತ್ಮಕ ವೀರಮಾಹೇಶ್ವರ ಷಟ್‌ಸ್ಥಲಗಳೆಂದೂ ದ್ವಿವಿಧವೆಂದರ್ಥವು ಅಂತಪ್ಪ ಷಟ್‌ಸ್ಥಲಗಳ ಮಧ್ಯದಲ್ಲಿ ಜ್ಞಾನಯೋಗದಲ್ಲಿ ರತಿಯುಳ್ಳವರು, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಸಂಜ್ಞೆಯುಳ್ಳ ವೀರಶೈವರು ಕರ್ಮಯೋಗದಲ್ಲಿ ರತಿಯುಳ್ಳವರು, ಭಕ್ತ, ಮಾಹೇಶ್ವರ, ಪ್ರಸಾದಿ ಎಂಬ ಸಂಜ್ಞೆಯುಳ್ಳ ವೀರಮಾಹೇಶ್ವರರು ಎಂದು ನಿರೂಪಿತವಾಗಿದೆ.

ಇದರಿಂದ ವೀರಶೈವರಲ್ಲಿ— ವೀರಮಾಹೇಶ್ವರ – ವೀರಶೈವರೆಂಬ-ಭೇದಗಳು ಹೇಳಲ್ಪಟ್ಟು, ಇವರಿಗೆ 'ಕರ್ಮಯೋಗಿ' 'ಜ್ಞಾನಯೋಗಿ'ಗ-ಳೆಂದು ಕರೆವುದು ಸಂಪ್ರದಾಯವಾಗಿದೆ ಅದುಕಾರಣ ಶ್ರೀ ರೇಣುಕ ಗುರುಗಳು—

ಶಿವಾಶ್ರಿತೇಷುತೇ ಶೈವಾಜ್ಞಾನಯಜ್ಞರತಾನರಃ ||
ಮಾಹೇಶ್ವರಾಃ ಸಮಾಖ್ಯಾತಾಃ ಕರ್ಮಯಜ್ಞರತಾಭುವಿ ||
ತಸ್ಮಾದಾಭ್ಯಂತರೇಕುರ್ಯುಃ ಶೈವಾಮಾಹೇಶ್ವರಾಬಹಿಃ ||
(ಸಿ ಶಿ ಪ ೫ ಶ್ಲೋ ೨೦–೨೧)

ಶಿವಾಶ್ರಿತಮಾನವರಲ್ಲಿ— ವೀರಶೈವರು, ಜ್ಞಾನಯಜ್ಞದಲ್ಲಿ ರತಿಯುಳ್ಳ-ವರು ವೀರಮಾಹೇಶ್ವರರು, ಕರ್ಮಯಜ್ಞದಲ್ಲಿ ರತಿಯುಳ್ಳವರು ಆದುದರಿಂದ ಆಭ್ಯಂತರವಾಗಿ ವೀರಶೈವರು, ಬಾಹಿರಂಗಿಕವಾಗಿ ವೀರಮಾಹೇಶ್ವರರು ಲಿಂಗಾರ್ಚನೆಗೆಯ್ಯುವರು " ಎಂದು ಉಪದೇಶಿಸಿರುವರು ಇಲ್ಲಿ ಬಹಿರ್ಯಜನ ಪರ್ಯಾಯವಾದ ಕರ್ಮಯಜ್ಞದಲ್ಲಿ ರತಿಯುಳ್ಳ ವೀರಮಾಹೇಶ್ವರರು ಅಂತರ್ಯಜನಾಪರಪರ್ಯಾಯಜ್ಞಾನಯಜ್ಞ ರತಿಯುಳ್ಳ ವೀರಶೈವರು ಎಂಬೀ ವೀರಶೈವದ್ವೈವಿಧ್ಯವು ಸ್ಪಷ್ಟವಾಗಿ ತೋರಿಸಲ್ಪ-ಟ್ಟಿದೆ ಆದುದರಿಂದಿಲ್ಲಿ— ವೀರಶೈವರೆಂದರೆ 'ಸ್ವತಂತ್ರ'ರೆಂದೇ ನಿರ್ದಿಷ್ಟವಾಗಿದೆ ಇದನ್ನು ಶ್ರೀಮರಿತೋಂಟದಾರ್ಯರು ತಮ್ಮ 'ತತ್ವ-ಪ್ರದೀಪಿಕ' ಯಲ್ಲಿ—

" ಶೈವಮಾಹೇಶ್ವರಯೋಃ ಜ್ಞಾನಂಕ್ರಿಯಾಚಸಮಾನ್ಯೈವೇತ್ಯನುಸಂ
ಧೇಯಂ| ಕಿಂತುಬಾಹ್ಯಾಭ್ಯಂತರ ಪೂಜಾಪ್ರೀತಿಮಾತ್ರಂ ವಿಶಿಷ್ಯತೇ,

ವೀರಶೈವ- ವೀರಮಾಹೇಶ್ವರಲ್ಲಿ ಜ್ಞಾನ ಮತ್ತು ಕ್ರಿಯೆಯು ಸಮಾನವೇ ಎಂದು ತಿಳಿಯಬೇಕು ಆದರೆ ಬಾಹ್ಯಪೂಜಾ ಅಂತರಪೂಜಾ ಪ್ರೀತಿಯು ಮಾತ್ರ ವಿಶಿಷ್ಟವಾಗಿದೆ " ಎಂದಾಜ್ಞೆಗೈಯ್ದಿರುವರು

ಇಲ್ಲಿ ಶ್ರೀಮರಿತೋಂಟದಾರ್ಯರು 'ಬಾಹ್ಯಾಭ್ಯಂತರ ಪೂಜಾಪ್ರೀತಿ ಮಾತ್ರಂ ವಿಶಿಷ್ಯತೇ, ಬಾಹ್ಯಪೂಜಾಪ್ರೀತಿ ಅಭ್ಯಂತರಪೂಜಾಪ್ರೀತಿ ವಿಶೇಷ ತೆಯಿಂದ ತೋರುವ ಭೇದವು, ಮೇಲ್ಕಂಡಂತೆ ವೀರಮಾಹೇಶ್ವರ ವೀರಶೈವ ದ್ವೈವಿಧ್ಯವನ್ನು ತೋರ್ಪಡಿಸುವುದರಿಂದ ಅಭ್ಯಂತರ ಪೂಜಾಪ್ರೀತಿಮಾ-ತ್ರ'ರು 'ಸ್ವತಂತ್ರ'ರೆಂದೇ ನಿರ್ಣಯಿಸಲ್ಪಡ ತ್ತಿದೆ ಹೇಗೆಯೇ ಶ್ರೀ ಎಸ್ ಆರ್ ಕೆರಿಬಸವ ಶಾಸ್ತ್ರಿಗಳು ತಮ್ಮ 'ತಾತ್ಪರ್ಯದೀಪಿಕೆ'ಯಲ್ಲಿ—

" ಅದುಕಾರಣ, ಭೂತಲದಲ್ಲಿ ವೀರಶೈವರು ಜ್ಞಾನಕಾಂಡ ಪ್ರತಿ ಪಾದಿತ ಪ್ರಾಣಲಿಂಗಿ ಶರಣ ಐಕ್ಯವೆಂಬ ಮೂರು ಸ್ಥಲಗಳ ಧರ್ಮವನ್ನು ಹೃದಯಕಮಲದಲ್ಲಿ ಆಚರಿಸುವರು ವೀರಮಾಹೇಶ್ವರರಾದರೋ— ಕರ್ಮಕಾಂಡೋಕ್ತ ಭಕ್ತಮಾಹೇಶ್ವರ ಪ್ರಸಾದಿ ಎಂಬ ಮೂರು ಸ್ಥಲಗಳ ಧರ್ಮವನ್ನು ಹೊರಗೆ ಆಚರಿಸುವರು ಮೋಕ್ಷಪ್ರಾಪ್ತಿಗೆ ಕರ್ಮಹೀನವಾದ ಜ್ಞಾನವೂ ಪ್ರಧಾನವಲ್ಲ ಜ್ಞಾನಹೀನವಾದ ಕರ್ಮವೂ ಪ್ರಧಾನವಲ್ಲ ಅದುಕಾರಣ ಅವೆರಡಕ್ಕು ಪ್ರಾಧಾನ್ಯವಿರುವುದು ಒಂದೇ ರೆಕ್ಕೆಯುಳ್ಳ ಹಕ್ಕಿಯು ಹೇಗೆ ಹಾರಲಾರದೋ ಹಾಗೆ ಕೇವಲ ಜ್ಞಾನವೇ ಆಗಲಿ, ಕೇವಲ ಕರ್ಮವೇ ಆಗಲಿ ಸಾಧಕವಾದುದಲ್ಲ ಕಾಲಿದ್ದರೂ ಕಣ್ಣಿಲ್ಲದ ಕುರುಡನೂ ಬೆಂಕಿಯಿಂದ ಸುಟ್ಟುಹೋಗುತ್ತಾನೆ ಕಣ್ಣಿದ್ದರೂ ಕಾಲಿಲ್ಲದ ಹೆಳವನೂ ಬೆಂಕಿಯಿಂದ ಸುಟ್ಟುಹೋಗುತ್ತಾನೆ. ಎಂಬುದೇ ಮೊದಲಾದ ಪ್ರಮಾಣ ವಚನಗಳಿರುವುದರಿಂದ ವೀರಶೈವರಿಗೂ,ವೀರಮಾಹೇಶ್ವರರಿಗೂ ಜ್ಞಾನವೂ ಕ್ರಿಯೆಯೂಸಹ ಸಮಪ್ರಧಾನಗಳು ಆದರೆ ಅವರಿಗೆ ಅಂತರ್ಲಿಂಗ ಪೂಜೆ ಬಹಿರ್ಲಿಂಗ ಪೂಜೆಗಳಲ್ಲಿ ಮಾತ್ರ ವಿಶೇಷವಿರುವುದೆಂಬರ್ಥ" ಎಂದು ಹೇಳಿರುವರು

ಇಲ್ಲಿ ಶ್ರೀ ಎನ್ ಆರ್ ಕರಿಬಸವ ಶಾಸ್ತ್ರಿಗಳವರು—'ಆದರೆ ಅವ ರಿಗೆ ಅಂತರ್ಲಿಂಗ ಪೂಜೆ ಬಹಿರ್ಲಿಂಗ ಪೂಜೆಗಳಲ್ಲಿ ಮಾತ್ರ ವಿಶೇಷವಿರುವು ದೆಂಬರ್ಥ" ಎಂಬುದರಿಂದ ವೀರಮಾಹೇಶ್ವರ ವೀರಶೈವ ದ್ವೈವಿಧ್ಯವು ಹೇಳಲ್ಪಟ್ಟು ಇಲ್ಲಿ—ವೀರಶೈವರೆಂದರೆ 'ಸ್ವತಂತ್ರ'ರೆಂದೇ ನಿರ್ಧರಗೊಳಿಸಿ-ರುವರು

ಇದರಿಂದ ಮೇಲ್ಕಂಡಂತೆ ವೀರಶೈವರಿಗೆ— "ವೀರಮಾಹೇಶ್ವರ" "ವೀರಶೈವ" ಗಳೆಂಬ ಪರ್ಯಾಯನಾಮಗಳುಂಟೆಂದೂ, ಇವರಿಗೇನೇ "ಕರ್ಮಯೋಗಿ" "ಜ್ಞಾನಯೋಗಿ" ಗಳೆಂದು ಕರೆಯುವುದೂ ಕೂಡ ಶಾಸ್ತ್ರ ಪ್ರಸಿದ್ಧವೆಂದೂ ತಿಳಿಯುತ್ತಿದೆ ಅದುಕಾರಣವಾಗಿ "ತತ್ರಕರ್ಮಯೋಗಂ ಪ್ರಪಂಚೇನ ನಿರೂಪಯಿತುಂ ಪರಿಚ್ಛೇದಾಂತರಮಾರಭತೇ" ಎಂದು ೩ನೇ ಪರಿಚ್ಛೆದವನ್ನಾರಂಭಿಸುವ "ಧರ್ಮಶಿರೋಮಣಿ" ಕಾರನು ೪ನೆಯ ಪರಿ ಚ್ಛೇದದ ಆದ್ಯ ಶ್ಲೋಕಾವತರಣಿಕೆಯಲ್ಲಿ "ಇತ್ಯಾದಿನಾ ಜ್ಞಾನಯೋಗಃ ಪ್ರತಿಪಾದಿತಃ। ತತ್ರ . ." ಇಂತೆಂಬುದಾಗಿ ನಿರೂಪಿಸುತ್ತ ಕೊನೆಯಲ್ಲಿ "ಜ್ಞಾನಯೋಗ ನಿರೂಪಣಂನಾಮ ಚತುರ್ಥ ಪರಿಚ್ಛೇದಸಮಾಪ್ತಃ" ಎಂದೂ ಸಮಾಪ್ತಗೊಳಿಸಿರುವನು

ಇದರಿಂದ ೩ನೆಯ ಪರಿಚ್ಛೇದದಲ್ಲಿ "ಕರ್ಮಯೋಗ" ವು ೪ನೆಯ ಪರಿಚ್ಛೇದದಲ್ಲಿ "ಜ್ಞಾನಯೋಗ" ವು ಪ್ರತಿಪಾದಿತವೆಂಬುದು ವಿಶದವಾಗು ವುದರಿಂದ ವೀರಶೈವ ದ್ವೈವಿಧ್ಯದಲ್ಲಿ "ಕರ್ಮಯೋಗಿ" "ಜ್ಞಾನಯೋಗಿ" ಎಂಬುದು ಸ್ಫುಟವಿದ್ದು, ಅವರಲ್ಲಿಯೂ "ಜ್ಞಾನಯೋಗಿ" ಯೆಂದರೆ "ಸ್ವತಂತ್ರ" ವೀರಶೈವನೇ ಎಂಬುದು ಕೈಗನ್ನಡಿಯಂತೆ ಸ್ಪಷ್ಟವಾಗುತ್ತಿದೆ

ವೀರಶೈವರಲ್ಲಿ—"ಜ್ಞಾನಯೋಗಿ" ಗಳಿಗೆ "ನಿರವಯವಿ" ಗಳೆಂದೂ, "ಶೂನ್ಯಧನುಭಾವಿ" ಗಳೆಂದೂ ಕರೆಯುವ ಸಂಪ್ರದಾಯವಿದೆ ಈ ಬಗ್ಗೆ ಶ್ರೀಮದಲ್ಲಮ ಪ್ರಭುಗಳು ಒಂದು ವಚನದಲ್ಲಿ— ಕಾಯದ ಕರಸ್ಥಲಕ್ಕೆ ಇಷ್ಟಲಿಂಗ ಸಾಹಿತ್ಯವಿಲ್ಲದಿದ್ದರೆ "ನಿರವಯ" ವಾದ "ಜ್ಞಾನಯೋಗ" ದ

ಕೊಟ ಸಾಧ್ಯವಾಗದು ಎಂದೂ * ಶ್ರೀ ಅಮುಗಿದೇವಯ್ಯಗಳು ಬರಿಯ "ಜ್ಞಾನಯೋಗ" ವೆಂಬ ಶೂನ್ಯದನುಭಾವಿಗೆ ಗುರುಭಕ್ತಿಯಿಲ್ಲ ಎಂದೂ, § ನಿರೂಪಿಸಿರುವರು

ಇಲ್ಲಿ " ಜ್ಞಾನಯೋಗಿ " ಗೆ " ನಿರವಯವ " " ಶೂನ್ಯದನುಭಾವಿ " ಎಂಬುದನ್ನು ವಿಮರ್ಶಿಸಿದರೆ "ಶೂನ್ಯ" ವೆಂಬುದು ನಿರವಯವವೆಂದೇ ತಿಳಿಯುತ್ತಿದೆ "ನಿರವಯವ" ವೆಂದರೆ "ನಿಷ್ಕಲ" ವೆಂದರ್ಥವು ಶ್ರೀಮರಿತೋಂಟದಾರ್ಯರು "ಸಿದ್ಧಾಂತ ಶಿಖಾಮಣಿ" ಯ ೧೧ನೆಯ ಪರಿಚ್ಛೇದದ "ನಿಷ್ಕಲೋಪಿ ಮಹಾದೇವೋ" ಎಂಬೀ ೨ನೆಯ ಶ್ಲೋಕದ ವ್ಯಾಖ್ಯಾನದಲ್ಲಿ

" ನಿಷ್ಕಲೋಪಿ ನಿರವಯವೋಪಿ " ಎಂದು ನಿಷ್ಕಲ—ನಿರವಯವ ಪದಗಳನ್ನು ಪರ್ಯಾಯವಾಗಿ ಪ್ರತಿಪಾದಿಸಿರುವರು

ಇದರಿಂದ "ನಿರವಯವಿ" ಯೆಂದರೆ "ನಿಷ್ಕಲತತ್ವಜ್ಞಾನನಿಷ್ಠ " ನೂ "ಶೂನ್ಯದನುಭಾವಿ" ಯೆಂದರೆ "ನಿಷ್ಕಲತತ್ವಾನುಭಾವಿ" ಯೂ ಎಂದು, "ಸ್ವತಂತ್ರ" ವೀರಶೈವವೇ ಸ್ಫುಟವಾಗುತ್ತಿದೆ ಮತ್ತು—

"ಬ್ರಹ್ಮ, ವಿಷ್ಣು, ರುದ್ರರು, ದೇವೇಂದ್ರ ಮೊದಲಾದ ಲೋಕಪಾಲರು, ಮುನಿಗಳು, ಸಿದ್ಧರು, ಗಂಧರ್ವರು, ದಾನವರು ಹಾಗು ಮಾನವರು ಇವರೆಲ್ಲ, ಸರ್ವಕಾರಣಗಳಿಗೆ ಕಾರಣವಾದುದೂ, ಪರಮಾನಂದರೂಪವೂ ಆದ "ಲಿಂಗ" ವನ್ನು ಹೃದಯದಲ್ಲಿ "ಜ್ಞಾನಯೋಗ" ದಿಂದ ನೋಡುತ್ತಾರೆ" ಎಂಬೀ ರೇಣುಕ ಗುರೂಕ್ತಿಗಳು ಕೆಳಗೆ ತೋರಿಸಲ್ಪಟ್ಟಿವೆ

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ವಾಸವಾದ್ಯಾಶ್ಚ ಲೋಕಪಾಃ |
ಮುನಯಸ್ಸಿದ್ಧ ಗಂಧರ್ವಾ ದಾನವಾ ಮಾನವಾಸ್ತಥಾ || ೨೪ ||

---

* ಶೂನ್ಯಸಂಪಾದನೆ ಪುಟ ೧೯೪–೧೯೫

§ ಶೂನ್ಯಸಂಪಾದನೆ ಪುಟ ೧೯೩

ನಶ್ಯೇಚ 'ಜ್ಞಾನಯೋಗೇನ' ಸರ್ವಕಾರಣಕಾರಣಂ |
ಪಶ್ಯಂತಿ ಹೃದಯೇಲಿಂಗಂ ಪರಮಾನಂದ ಲಕ್ಷಣಂ || ೬೫ ||
—ಸಿ ಶಿ ಪರಿ ೬

ಇದರಿಂದ ಬ್ರಹ್ಮ, ವಿಷ್ಣು ಮುಂತಾದವರೆಲ್ಲ "ಜ್ಞಾನಯೋಗಿ" ಗಳೆಂದರೆ "ಸ್ವತಂತ್ರ" ವೀರಶೈವರೆಂದೇ ನಿರ್ಣಯವಾಗುತ್ತಿದೆ

ಇಂತು ಚಂದ್ರಜ್ಞಾನಾಗಮ" "ವೀರಾಗಮ" ಗಳಲ್ಲಿ ಉಕ್ತವಾದ "ಶ್ರೌತ-ಸ್ವತಂತ್ರ" ಪದಗಳನುಸಾರವಾಗಿ "ವೀರಶೈವಸಾಹಿತ್ಯ" ನನ್ನು ವಿಮರ್ಶಿಸುತ್ತ ಹೋದಲ್ಲಿ, ಪರ್ಯಾಯವಾಗಿ ಭಿನ್ನ ಭಿನ್ನ ಪದಪ್ರಯೋಗ ಗಳನ್ನು ಕಾಣಬಹುದಾಗಿದೆ. ಪ್ರಭುಲಿಂಗ ಲೀಲಾಕಾರನು 'ಕುಲ' 'ಅಕುಲ' ವೆಂಬುದಾಗಿ ವೀರಶೈವವನ್ನು ನಿರೂಪಿಸಿರುವನು ಹೇಗೆಂದರೆ-

ಕುಲಾಕುಲತ್ವೇನಹಿ ವೀರಶೈವಂ |
ದ್ವಿಧಾವಿಭಿನ್ನಂ ಕುಲಮಾರ್ಗನಿಷ್ಠೈಃ ||
ಯದೇವ ಲಿಂಗಾಂಗಿ ಭಿರಾಶ್ರಿತಂಸ್ಯಾ |
ಚ್ಛಿವೋಕ್ತರೀತ್ಯಾ ಕುಲವೀರಶೈವಂ ||
ಪ್ರ ಲಿಂ ಲೀ ಅ ೨೪ ಶ್ಲೋ ೧೨೭

ಕುಲ ಮತ್ತು ಅಕುಲವೆಂಬ ಭೇದದಿಂದ ವೀರಶೈವವು ಎರಡು ಪ್ರಕಾರವಾಗಿದೆ ಕುಲಮಾರ್ಗನಿಷ್ಠರಾದ ಲಿಂಗಾಂಗಿಗಳಿಂದ ಆವುದು ಆಶ್ರಯಿಸಲ್ಪಡುವುದೋ ಅದು ಶಿವೋಕ್ತ ರೀತಿಯಾಗಿ 'ಕುಲ' ವೀರಶೈವವೆಂದು ಪ್ರಸಿದ್ಧವಾಗಿದೆ

ಇಲ್ಲಿ "**ತದೀಯಧರ್ಮರಹಿತಂ ಸ್ವತಂತ್ರಮಿತಿ ಕಥ್ಯತೇ**" ಎಂಬ ಪೇಲ್ಕಂಡ ಚಂದ್ರಜ್ಞಾನಾಗಮದಂತೆಯೂ, "ಸ್ವತಂತ್ರಮಿತರತ್ ಸ್ಮೃತಂ" ಎಂಬೀ ವೀರಾಗಮದಂತೆಯೂ, ವರ್ಣ—ಆಶ್ರಮ—ಜಾತಿ—ಕುಲ

ಮೊದಲಾದ 'ಜನ್ಮ'ಕ್ಕೆ ಅಸ್ಪದವಿರದಿರುವ 'ಅಕುಲ' ಪದದಿಂದ 'ಸ್ವತಂತ್ರ' ವೀರಶೈವವೇ ಉಕ್ತವಾಗಿದೆ ಎಂಬುದು ಸ್ಫುಟವೇ ಇದೆ

ಇದರಿಂದ ವೀರಶೈವ ಸಾಹಿತ್ಯದಲ್ಲಿ ಮೇಲ್ಕಂಡ ಶ್ರೌತಾದಿ ವೀರಶೈವಕ್ಕೆ ಪರ್ಯಾಯವಾಗಿ 'ಕುಲ' 'ಅಕುಲ' ಗಳೆಂದು ಪ್ರಸಿದ್ಧವಿದ್ದು ಇವಕ್ಕೆ ಪರ್ಯಾಯವಾಗಿ 'ವಂಶ್ಯ' 'ಆಗಂತುಕ' ಪದಗಳೂ ಉಂಟೆಂಬುದು ತಿಳಿದು ಬರುತ್ತಿದೆ ಹೇಗೆಂದರೆ, "ವೀರಶೈವಾಚಾರ ಕೌಸ್ತುಭ" ದಲ್ಲಿ—

ವಂಶ್ಯ ಆಗಂತುಕಶ್ಚೇತಿ ದ್ವಿವಿಧಃಶಿಷ್ಯ ಈರ್ಯತೇ ||

ಗುರುಪ್ರಸನ್ನತೆಯ ಪಡೆದ ವೀರಶೈವ ಶಿಷ್ಯನು ಇತ್ತೆರನಾಗಿರುವನು ಒಬ್ಬನು ವಂಶಸಂಭೂತನೂ, ಮತ್ತೊರ್ವನು ಆವುದಾದರೊಂದು ಜನಾಂಗದಿಂದ ಬಂದವನೂ" ಎಂದು ಹೇಳಲ್ಪಡುತ್ತಿದೆ

ಇದರಿಂದ 'ಆಗಂತುಕ' ಪದದಿಂದಲೂ 'ಸ್ವತಂತ್ರ' ವೀರಶೈವವೇ ಪರ್ಯಾಯವಾಗಿ ಪ್ರತಿಪಾದಿತವಾದುದು ಸ್ಪಷ್ಟವೇ ಇದೆ

ಈ ರೀತಿಯಾಗಿ ವೀರಶೈವ ಸಾಹಿತ್ಯದಲ್ಲಿ— ವೀರಶೈವದ್ವೈವಿಧ್ಯವನ್ನು ಪರ್ಯಾಯದಿಂದ ಹಲವು ಪದಪ್ರಯೋಗಗಳಿಂದ ಕಾಣಬಹುದಾಗಿದೆ

## ವೈದಿಕ ತಾಂತ್ರಿಕ ರಹಸ್ಯ

ಇನ್ನು ವೀರಶೈವವು— 'ಶ್ರೌತ' 'ಸ್ವತಂತ್ರ'ವೆಂದು 'ಚಂದ್ರಜ್ಞಾನಾಗಮ' 'ವೀರಶೈವಾಮೃತ ಮಹಾಪುರಾಣ' ತದುದಾಹೃತ 'ವೀರಾಗಮ'ಗಳಿಂದ ತಿಳಿದುದಾಯ್ತು ಶ್ರೀ ಕರಭಾಷ್ಯೋದಾಹೃತ 'ಶಿವಾಗಮ' ಪ್ರಮಾಣದಿಂದ 'ಶ್ರೌತ–ಶೈವ' 'ತಂತ್ರ–ಶೈವ'ವೆಂದೂ ಅವಗತವಾದುದು 'ಕ್ರಿಯಾಸಾರ' 'ಸೂಕ್ಷ್ಮಾಗಮ'ಗಳಿಂದ 'ವೇದಸಹಿತ ವೇದವಿರುದ್ಧ'ವೆಂಬುದೂ ಮನವರಿಕೆಯಾಯ್ತು ಶ್ರೀಕರಭಾಷ್ಯೋದಾಹೃತ ಶಿವಾಗಮದಲ್ಲಿ ಉಕ್ತವಾದ 'ಶ್ರೌತಾಶ್ರೌತ ವಿಭೇದ'ದಂತೆ 'ಲಿಂಗೋಪನಿಷತ್ತು' 'ಶ್ರೌತಾ ಶ್ರೌತ'ಗಳನ್ನು ಜ್ಞಾಪಕಗೊಳಿಸಿತು ಇದೇ 'ಶ್ರೌತಾಶ್ರೌತವಿಭೇ

ದವು' ಹಾರೀತ– ಶಾತಾತಪ– ಶೌನಕ– ಗೌತಮ– ಪಾರಾಶರ-ದಕ್ಷ ಮೊದಲಾದ ಸ್ಮೃತಿಗಳಲ್ಲಿ ಉಕ್ತವಾದುದು – ಸ್ಮೃತಿಪಥಕ್ಕೆ ಬಂದುದಾಯ್ತು ಶ್ರೀ ಶಂಕರದಾಸಿಮಾರ್ಯ ಪುರಾಣದಿಂದ ಶ್ರುತ – ಅಶ್ರುತಗಳೆಂಬುದು, ತಿಳಿಯಲ್ಪಟ್ಟಿತು 'ಸಿದ್ಧಾಂತ ಶಿಖಾಮಣಿ' ಮೊದಲಾದವುಗಳಿಂದ, 'ವೀರಮಾಹೇಶ್ವರ' 'ವೀರಶೈವ'ರೆಂಬ ವಿಭೇದವು ತಿಳಿದುದಾಯ್ತು 'ವೀರಶೈವ ಧರ್ಮಶಿರೋಮಣಿ' 'ಶ್ರೀಸಿದ್ಧರಾಮಯ್ಯಗಳ ವಚನ' 'ಶ್ರೀಮದಲ್ಲಮಪ್ರಭುದೇವರ ವಚನ' 'ಶ್ರೀ ಅಮುಗಿದೇವಯ್ಯಗಳ ವಚನ' 'ಸಿದ್ಧಾಂತ ಶಿಖಾಮಣಿ' ಇವುಗಳಿಂದ 'ಕರ್ಮಯೋಗ' 'ಜ್ಞಾನಯೋಗ'ಗಳೆಂಬುದಲ್ಲದೆ ಜ್ಞಾನಯೋಗಿಗೆ—'ನಿರವಯವಿ' 'ಶೂನ್ಯದನುಭಾವಿ' ಎಂಬುದೂ ಅವಗತವಾಯ್ತು 'ಕುಲ' ಅಕುಲ'ವೆಂಬುದು, 'ಪ್ರಭುಲಿಂಗಲೀಲೆ'ಯಿಂದ ಪ್ರತ್ಯಕ್ಷವಾಯ್ತು 'ವೀರಶೈವಾಚಾರ ಕೌಸ್ತುಭ'ದಿಂದ, 'ವಂಶ್ಯ' 'ಆಗಂತುಕ'-ವೆಂಬುದು, ಅವಲೋಕಿತವಾಯ್ತು 'ವೈದಿಕ' 'ತಾಂತ್ರಿಕ'ವೆಂಬುದು, 'ಕಾರಣಾಗಮ' 'ಸೂಕ್ಷ್ಮಾಗಮ'ಗಳಿಂದ ಸೂಚಿತವಾಯಿತು

ಇಂತು 'ಶ್ರೌತ' 'ಸ್ವತಂತ್ರ' ಪದಗಳಿಗೆ ಪರ್ಯಾಯ ಪ್ರತಿಪಾದಕವಾದ ವೈದಿಕ, ತಾಂತ್ರಿಕ ಪದಗಳ ವರೆಗಿನ ಸೂಚಿಯು ತೋರಿಸಲ್ಪಟ್ಟಿತು

ಈಬಗೆಯಿಂದ ಮೇಲ್ಕಂಡ ವೈದಿಕ, ತಾಂತ್ರಿಕ ವಿಭಾಗವುಳ್ಳ ವೀರಶೈವ ಸಾಧಕರು, ಸಿದ್ಧದಶೆಯಲ್ಲಿ 'ಮುಕ್ತಃ ಶಿವಸಮೋಭವೇತ್, (ಸಿ ಶಿ ಪ ೯ ಶ್ಲೋ ೧೪) ಎಂಬೀ ರೇಣುಕಗುರುವರರ ಅಪ್ಪಣೆಯಂತೆ, ಶಿವಸಮಾನರೇ ಆಗುವರು ಆದುಕಾರಣ ವೈದಿಕ, ತಾಂತ್ರಿಕ ವಿಭೇದವು ವೀರಶೈವರ ಸಾಧಕ ದಶೆಯನ್ನೇ ಹೇಳುತ್ತಿದೆ.

ಈಬಗ್ಗೆ ಶ್ರೀಮನ್ನಿಜಗುಣ ಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯ ೩ನೆಯ ಪ್ರಕರಣದ ಕೊನೆಯಲ್ಲಿ—

"ಭಾಗವತ ಶಿವಸಿದ್ಧಾಂತಗಳೇ ವೈದಿಕ ತಾಂತ್ರಿಕವೆಂದು ಪೇಳ್ವುದೇ ಚರ್ಯಾಪಾದ ಮುಖ್ಯಂ" ಎಂದು ಉದ್ಘೋಷಿಸಿರುವರು

ಇಲ್ಲಿ— ಶಿವಾಗಮಗಳಲ್ಲಿದ್ದಂತೆ ವೈದಿಕ, ತಾಂತ್ರಿಕ ವಿಭೇದವು (ಭಾಗವತ-ಪರ್ಯಾಯ) "ಪಾಂಚರಾತ್ರಾಗಮ"ಗಳಲ್ಲಿಯೂ ಉಂಟೆಂದು ಸೂಚಿಸಲು, ಭಾಗವತ ಪದವು ನಿರ್ದೇಶಿಸಲ್ಪಟ್ಟಿದೆ

ಇನ್ನು ಕ್ರಿಯಾ-ಚರ್ಯಾ-ಜ್ಞಾನಯೋಗಗಳೆಂಬ ನಾಲ್ಕು ಪಾದಗಳುಳ್ಳ ಶಿವಾಗಮಗಳಲ್ಲಿ— ವೈದಿಕ, ತಾಂತ್ರಿಕವೆಂಬುದು, ಚರ್ಯಾಪಾದವೆಂದು ಶ್ರೀನಿಜಗುಣಾರಾಧ್ಯರಿಂದ ತಿಳಿದು ಬರುತ್ತಿದೆ

ವೀರಶೈವ ಮತದಲ್ಲಿ— ಪ್ರಕರ್ಷಯುಕ್ತವಾದುದೂ, ಶಿವನಿಂದ ವಿಹಿತವಾದುದೂ, ಬಹಿರ್ಯಜನ- ಅಂತರ್ಯಜನಾತ್ಮಕ ಶಿವಯಜ್ಞಾ-ಪರಪರ್ಯಾಯವಾದ ಲಿಂಗಾರ್ಚನೆಯೇ ಆದಿಯುಳ್ಳುದೂ, ವರ್ಣಾಶ್ರಮಾಢ್ಯವೂ ತದ್ರಹಿತವೂ ಆದ ಶ್ರೌತ- ಸ್ವತಂತ್ರಾತ್ಮಕವಾದ ವೈದಿಕ, ತಾಂತ್ರಿಕರೂಪ ಸ್ವಧರ್ಮದ ಆಚರಣೆಯೇ ಚರ್ಯೆಯೆಂದು ಹೇಳಲ್ಪಡುತ್ತಿದೆ-" ಎಂಬೀಪಾರಮೇಶ್ವರಾಗಮ ವಚನವು, ಈ ಕಳಗೆ ಉದಾಹರಿಸಲ್ಪಟ್ಟಿದೆ

ವೀರಶೈವ ಪ್ರಯುಕ್ತಸ್ಯ ಶಿವೇನವಿಹಿತಸ್ಯಚ ॥ ೪೮ ॥
ಲಿಂಗಾರ್ಚನಾದೇಃ ಸ್ವಧರ್ಮಸ್ಯಚರ್ಯಾ ಚರ್ಯೇತಿ ಕಥ್ಯತೇ ॥
(ಪಾ ತಂ ಪ ೧೩)

ಇಂತಹ ಚರ್ಯಾಪ್ರಧಾನವಾದ ಪಾದವಾವುದೋ ಅದು 'ಚರ್ಯಾಪಾದ' ವೆಂದು ಪ್ರಸಿದ್ಧವಾಗಿದೆ ಆದುದರಿಂದ ಕ್ರಿಯಾಸಾರದ ೨ನೆಯ ಉಪದೇಶದಲ್ಲಿ—

ಚರ್ಯಾಯೋಗಕ್ರಿಯಾಜ್ಞಾನ ಪ್ರತಿಪಾದನ ಭೇದತಃ ॥
ತತ್ತನ್ನಾಮಾಂಕಿತಾಃ ಪಾದಾಶ್ಚತ್ವಾರಸ್ತೇಷು ವಿಶ್ರುತಾಃ ॥೬॥
ಚರ್ಯಾಪಾದೇಶಿವಾಚಾರಾ ಬಹವಃ ಕಾಮಮೋಕ್ಷದಾಃ ॥
ವೈದಿಕಾಚಾರಸದೃಶಾಃಕ್ವಚಿತ್ತೇಷೂಪ ವರ್ಣಿತಾಃ ॥ ೭ ॥
ಕ್ವಚಿದ್ವೇದವಿರೋಧಾಶ್ಚ ಶ್ರೂಯಂತೇ ತತ್ರತತ್ರತು ॥ ‡

‡ ವೈದಿಕಾಚಾರ ಸದೃಶತ್ವವು, ಆಗಮೋಕ್ತ ಶಿವಾಚಾರಗಳಿಗೆಂದು ತೋರುವ ವೇದಭೇದವು ಆಗಮಗಳಿಗೆ ಸ್ವತಃ ಪ್ರಾಮಾಣ್ಯಮೂಲಕ ವೆಂಬುದು ಬೋಧ್ಯವಾಗಿದೆ

[ಚರ್ಯಾಯೋಗ ಕ್ರಿಯಾಜ್ಞಾನ ಭೇದದಿಂದ ಆ ಆನಾಮಾಂತವಾದ ಚರ್ಯಾಪಾದ ಮೊದಲಾದ ನಾಲ್ಕು ಪಾದಗಳು ಆಗಮಗಳಲ್ಲಿ ಪ್ರಸಿದ್ಧ-ವಾಗಿವೆ ಆ ಆಗಮಗಳ ಕ್ವಚಿದ್ಭಾಗವಾದ ಚರ್ಯಾಪಾದದಲ್ಲಿಯಾದರೋ-ಕಾಮ ಮೋಕ್ಷ-ಪ್ರದವಾದ ಬಹು ಶಿವಾಚಾರಗಳು, ವೈದಿಕಾಚಾರ ಸಮ-ವಾಗಿ ಪ್ರತಿಪಾದಿತವಾಗಿವೆ ಮತ್ತು ವೇದವಿರೋಧಿಯಾಗಿಯೂ, ಅಲ್ಲಲ್ಲಿ ಶ್ರವಣಮಾಡಲ್ಪಡುತ್ತಿವೆ ] ಎಂದು ನಿರೂಪಿತವಾಗಿದೆ ಆದುದರಿಂದ ವೈದಿಕ ವೇದವಿರೋಧಪರ್ಯಾಯಗಳಾದ ವೈದಿಕ, ತಾಂತ್ರಿಕ, ಪದಗಳುಳ್ಳ ಈ ವಿಭಾಗವು, ಚರ್ಯಾಪಾದದಲ್ಲಿ ಸಾಧಕರಿಗೇನೆ ಹೇಳಲ್ಪಟ್ಟಿದೆ ಆದರೆ ಸಿದ್ಧ ದಶೆಯಲ್ಲಿ ಅಂದರೆ ಜ್ಞಾನಪಾದಾದಿಗಳಲ್ಲಿ ಇಂತಹ ವಿಭೇದವಿಲ್ಲವಾಗುವುದು ವೈದಿಕ ತಾಂತ್ರಿಕನು "ವೀರಶೈವಾಗಮಾನಾಂತು ವಿಶೇಷೋಽಪ್ಯೈಕರೂಪತಾ" ಎಂಬೀ ಕ್ರಿಯಾಸಾರದ ಉಪೋದ್ಘಾತ ವಚನದಂತೆ, ತಾಂತ್ರಿಕ ವೈದಿಕ-ನಾದುದೇ ವೀರಶೈವ ವೈಶಿಷ್ಟ್ಯವು ಅದುಕಾರಣ ಪೂರ್ಣಶಿವಜ್ಞಾನಿಗ-ಳಾದ ಶಿವಶರಣರೇ ಪ್ರತ್ಯಕ್ಷಶಿವರೂಪಿಗಳು ಈ ಬಗ್ಗೆ ವೀರಶೈವಾಮೃತ ಮಹಾಪುರಾಣದಲ್ಲಿ ೭ನೆಯ ಕಾಂಡ ಸಂಧಿ ೧೬ ಪದ್ಯ(೯)ರಲ್ಲಿ—

ಶಿವಭಕ್ತನಂ ಶಿವನೆಂಬುದಾತನಕುಲವ |
ವಿವರಿಸಲು ತನ್ನಲಿಂಗವನೆ ಕಲ್ಲೆಂದುನುಡಿ |
ದವನದೋಷಂ ತಾಮ್ರಲೋಹಾದಿಗಳು ಪರುಷವಂಟಿ ಚಿನ್ನವ ದಾಗಲು ||
ಇವಕೆ ಲೋಹಾದಿ ಗುಣವುಂಟೇ? ಕೆಸರೊಳಂಬುಜ |
ವವಿರತಂ ಕಲ್ಲೊಳಗೆ ಚಿನ್ನ ಪಾಕಾಷ್ಠಸಂ |
ಭವಮನಲನೆಂಬವೋಲೆಲ್ಲಿ ಜನಿಸಿದವರಾಗಲಿ ಭಕ್ತರೆಲ್ಲಾ ಶಿವಂ||

ಎಂದು ಹೇಳಿದೆ

ಇಲ್ಲಿ ತಾಮ್ರಕಬ್ಬಿಣಗಳು, ಪರುಷಮಣಿಯ ಸೋಂಕಿನಿಂದ ಬಂಗಾರ ವಾಗಲು, ಮರಳಿ ತಾಮ್ರ ಕಬ್ಬಿಣಗಳಾಗುವವೇ? ಕೆಸರಿನಲ್ಲಿ ಕಮಲವು, ಕಲ್ಲೊಳಗೆ ಬಂಗಾರವು, ಕಟ್ಟಿಗೆಯಲ್ಲಿ ಅಗ್ನಿಯು ಹುಟ್ಟಿದಂತೆ ಎಲ್ಲಿ ಬೇಕಾದಲ್ಲಿ ಜನಿಸಿದರೂ ಭಕ್ತರೆಲ್ಲಾ ಶಿವರೂಪಿಗಳೇ ಎಂದು ತಿಳಿಯುತ್ತಿದೆ

ಕೃತಕೃತ್ಯರಾದ ಈ ಶಿವಯೋಗಿಗಳಿಗೆ ಮುಂದೆ ಮಾಡಬೇಕಾದು ದೇನೂ ಇರುವದಿಲ್ಲ ಈ ಬಗ್ಗೆ ಶಿವವಚನವು—

ಯಥೈವ ಪರಿಪೂರ್ಣಸ್ಯಸಾಧ್ಯಂ ಮಮನವಿದ್ಯತೇ ||
ತಥೈವಕೃತಕೃತ್ಯಾನಾಂ ತೇಷಾಮಪಿನಸಂಶಯಃ ||

—ಪಾ ತಂ ಪ ೧೨ ಶ್ಲೋಕ ೩೮

ಹೇಗೆ ಪರಿಪೂರ್ಣನಾದ ನನಗೆ ಸಾಧಿಸಬೇಕಾದುದು ಆವುದೊಂದಾದರೂ ಇಲ್ಲವೋ ಹಾಗೆಯೇ ಕೃತಕೃತ್ಯರಿಗೆ ಸಾಧಿಸಬೇಕಾದುದು ಆವುದೊಂದಾದರೂ ಇಲ್ಲ ಈ ಬಗ್ಗೆ ಸಂಶಯವಿಲ್ಲವೆಂದು ಜಾಗರೂಕವಾಗಿದೆ

ಇಂತೀ ವಿವೇಚನೆಯಿಂದ ಎಲ್ಲಿ ಬೇಕಾದಲ್ಲಿ ಹುಟ್ಟಿ, ಗುರುದೀಕ್ಷಿತರಾದ ಭಕ್ತರು ಶಿವರೂಪಿಗಳಾಗಬೇಕಾದರೆ ಸ್ತ್ರೀ ಶೂದ್ರಾದಿಗಳಿಗೆ ವೀರ-ಶೈವವು ಹೇಗೆ ಅವಕಾಶವಿತ್ತಿದೆ ಎಂಬುದೂ ತಿಳಿಯುತ್ತಿದೆ ಇದೇನೆ ಜನ್ಮ ಮೊದಲಾದವುಗಳಿಗೆ ಮಹತ್ವಕೊಟ್ಟ, ವೇದನಿಯಮಬದ್ಧರಾದ "ವೈದಿಕ" ರಿಗಿಂತ ವಿಲಕ್ಷಣವಾದ ಧರ್ಮಸ್ವಾತಂತ್ರ್ಯವು !! ಇದೇನೆ ಎಲ್ಲ ಮಾನವಕೋಟಿಯನ್ನುದ್ಧರಿಸುವ ಮಹಾದೇವ ಮಂದಿರ !! ಇದೇನೆ ಸಂಸಾರತಪ್ತರಿಗೆ ಇನಿದಾದ ತನಿರಸವೀವ ಭುವನಚಂದಿರ !! ಇದೇನೆ ಭವವಿಪಿನವಿದಾಹಕವೆಂದು ನೆಗಳ್ತೆವಡೆದ ಸುಕುಮಾರ ಶಿವಗುರುಪ್ರತಿಷ್ಠಿತ ಶಿವಯೋಗಮಂದಿರ !! ಇದೇನೇ ಆರಾದರೂ ಇಲ್ಲಿ ಸೇರಿದರೆ ವೈದಿಕರೆಂದು ಬಿಡಿಸಿದ ಸಮಸ್ಯೆ !! ಇದೇನೇ ವೈದಿಕ ತಾಂತ್ರಿಕ ರಹಸ್ಯ !!

## ಉಪಸಂಹಾರ

ಸ್ತ್ರೀಯರಾಗಲಿ, ಶೂದ್ರಾದಿಗಳೇ ಆಗಲಿ ಇನ್ನಿತರವಾದ ವಿಶ್ವದ ಜನರಾರೇ ಇರಲಿ, "ಭಕ್ತಿಮಾತ್ರ ಪವಿತ್ರಾಹಿ ಸರ್ವಏವಾಧಿಕಾರಿಣಃ" ಎಂಬೀ ಪಾರಮೇಶ್ವರಾಗಮ ವಚನದಂತೆ ಈ ಮತದಲ್ಲಿ ಸೇರಿ ಗುರುಕಾರುಣ್ಯರೂಪ ದೀಕ್ಷೆಯಿಂದ ಭಕ್ತರಾಗಿ ಈ ಮತದಲ್ಲಿ ಅಧಿಕಾರಿಗಳಾದುವೇ ಸ್ವತಂತ್ರವು

ಸಾಮಾನ್ಯ ವಿಶೇಷ ನಿರಾಭಾರಾತ್ಮಕ ವೀರಶೈವ ಧರ್ಮಗಳನ್ನು ಅನುಷ್ಠಿಸಲು, ಅಷ್ಟಾವರಣ–ಪಂಚಾಚಾರ–ಷಟ್‌ಸ್ಥಲಗಳಲ್ಲಿ ಅನುವು ದೊರೆತುದೇ ಸಮತೆಯು

ಯೇಸಂತಿಜಾತಿಭೇದಾಸ್ತಾನೇಕವಚ್ಛಿವಯೋಗಿನಃ ||
ಪಶ್ಯೇದಖಿಲಜಾತಿಸ್ಥಾನೇಕ ಮಾತೃಸಹೋದರಾನ್ ||

ಜಾತಿಭೇದಗಳು ಆವವುಂಟೋ ಅವುಗಳನ್ನೆಲ್ಲ ಒಂದೇ ಎಂದು ಕಾಣಬೇಕು ಎಲ್ಲ ಜಾತಿಸ್ಥರಾದವರನ್ನು ಒಂದೇ ತಾಯಿಯ ಮಕ್ಕಳಾದ ಸೋದರರ ನ್ನಾಗಿ ಕಾಣಬೇಕು ಎಂಬೀ ಪಾರಮೇಶ್ವರಾಗಮ ವಚನದಂತೆ ಬಂಧುತ್ವವು

ಇಂತು ವೀರಶೈವ ಪ್ರವಿಷ್ಟರಾದವರು ಧರ್ಮದಲ್ಲಿ 'ಸ್ವಾತಂತ್ರ್ಯ'ದಿ ಗುಣಗಳನ್ನು ಸಂಪಾದಿಸಿ, ಲಿಂಗಾಂಗ ಸಾಮರಸ್ಯವನ್ನಭ್ಯಸಿಸುತ್ತ 'ಜಾತ್ಯತೀತ' ವರ್ತನೆಯಿಂದ ಶಿವರೂಪಿಗಳಾಗುವುದೇ ವೀರಶೈವ ಸಿದ್ಧಾಂತವು

ಆ ಶಿವಾಗಮಗಳಾದರೋ, 'ಪುರಾಣಕಾಲ' 'ಮಹಾಭಾರತಕಾಲ' 'ಸ್ಮೃತಿಕಾಲ' 'ಉಪನಿಷತ್ಕಾಲ' ಗಳಿಗಿಂತ ಪ್ರಾಚೀನವೆನಿಸಿವೆಯಲ್ಲದೆ, 'ವೇದಕಾಲ' ವಾವುದೋ ಅದೇ 'ಶಿವಾಗಮಕಾಲ' ವಾಗಿದೆ.

ವೇದಕಾಲವು ಇನ್ನೂ ನಿಶ್ಚಿತವಾಗಿಲ್ಲವೆಂದು ಪಂಡಿತರ ಅಭಿಪ್ರಾಯವು ಈ ಮೊದಲೇ ತೋರಿಸಲ್ಪಟ್ಟಿದೆ ಆದುದರಿಂದ "ವೇದಾಗಮ"ಗಳು "ಅನಾದಿ" ಯಾದವುಗಳೆಂದೂ, "ಈಶಾನ ಶಿವಗುರು" ಗಳು ಅಪ್ಪಣೆಗೊಳಿಸಿದುದೂ ಕೂಡ ತೋರಿಸಲ್ಪಟ್ಟಿದೆ ಅದುಕಾರಣವಾಗಿ—

ಇಂತಪ್ಪ "ಅನಾದಿ" ಯಾದ "ಶಿವಾಗಮ" ಗಳಲ್ಲಿ **"ಸ್ವತಂತ್ರಮಿತಿ ಕಥ್ಯತೇ"** ಚಂ ಪ ೧೦ ಶ್ಲೋಕ ೩೧ ಎಂದೂ, **"ಸ್ವತಂತ್ರಮಿತರತ್ ಸ್ಮೃತಂ"** (ವೀ ಶೈ ಆ ಮ ಪು ಉ. ವೀರಾಗಮ) ಎಂದೂ, ಪುರ

ಸ್ಕಾರಗೊಂಡ "ಸ್ವಾತಂತ್ರ್ಯ" ವು ಎಂದಿನಿಂದಲೂ ಬಂದುದರಿಂದ 'ಅನಾದಿ' ಯಾಗಿದೆಯಲ್ಲದೆ ಇಂದು ನಿನ್ನೆಯಿಂದ ಬಂದುದಲ್ಲವೆಂದು ಸಾರುವುದೇ ಮುಖ್ಯವಾಗಿದೆ ಅದುಕಾರಣವಿದು **"ಸ್ವಾತಂತ್ರ್ಯದ ಅನಾದಿತ್ವ"** ವೆಂದು ಉದ್ಘೋಷಿಸಲ್ಪಟ್ಟಿದೆ ಇದುವೇ ವರ್ಣಾಶ್ರಮಾದಿವೇದನಿಯ ಬದ್ಧರಾದ "ವೈದಿಕ" ರಿಗಿಂತ ತಾಂತ್ರಿಕರು "ಸ್ವತಂತ್ರ" ರೆಂಬ **ವೈದಿಕ ತಾಂತ್ರಿಕ ರಹಸ್ಯಂ** ಶಿವಂಭೂಯಾತ್ ಓಂಶಾಂತಿಃ ಶಾಂತಿಃ

ಶಾಂತಿಃ

— ಸಮಾಪ್ತವಾದುದು —






## ಪ್ರಕಾಶಕ ಸದ್ಧರ್ಮದೀಪಿಕೆ, ಮೈಸೂರ
## ಇವರ ವಿಮರ್ಶೆ

“ಈ ಪುಸ್ತಕವನ್ನು ಪಂಡಿತ ಶ್ರೀ ಗೌರೀನಾಥ ಶಾಸ್ತ್ರಿಗಳು ರಚಿಸಿರುತ್ತಾರೆ. ಕಿರೀಟಾಕಾರ ಅಷ್ಟಪತ್ರ ೭೫ ಪುಟಗಳುಳ್ಳದ್ದಾಗಿದೆ. ವೀರಶೈವರು ಸ್ವತಂತ್ರ ಧರ್ಮದವರು, ಜಾತ್ಯತೀತ ವರ್ತನೆಯಿಂದ ಪ್ರಕರ್ಷವರು ಆಗಿದ್ದಾರೆ ಎಂಬುದನ್ನು ತೋರಿಸುತ್ತವೆ. ವೇದಗಳ ಕಾಲವೂ, ಶಿವಾಗಮಗಳ ಕಾಲವೂ ಒಂದೇ ಎಂದೂ, ವೀರಶೈವವು ಸನಾತನವಾಗಿ ಆ ಕಾಲದಿಂದಲೂ ಬಂದಿದೆ ಎಂದೂ ಪ್ರತಿಪಾದಿಸಿದ್ದಾರೆ. ಆದರೆ ಆ ಕಾಲದಿಂದ ಇಲ್ಲಿನವರೆವಿಗೆ ಯಾವ ಯಾವ ರೀತಿಯಲ್ಲಿ ಅದು ಪ್ರಚಾರವಾಯಿತೆಂಬ ಸಂಗತಿಗಳನ್ನು ಚಾರಿತ್ರಿಕಾಂಶಗಳಿಂದ ವಿಶದೀಕರಿಸಿದ್ದರೆ ಚನ್ನಾಗಿರುತ್ತಿತ್ತು. ಗ್ರಂಥಕರ್ತರ ಉಜ್ವಲವಾದ ಧರ್ಮಾಭಿಮಾನಕ್ಕಾಗಿ ಸಂತೋಷಿಸಬೇಕಾಗಿದೆ.”

ಮೈಸೂರು
೧೫—೭—೧೯೫೭

---

## ಪ್ರೊ. ಸಂ. ಶಿ. ಭೂಸನೂರಮಠ, ಎಂ. ಎ.,
## ಲಿಂಗರಾಜ ಕಾಲೇಜ ಬೆಳಗಾಂವ ಇವರ ಅಭಿಪ್ರಾಯ

“ಪಂಡಿತ ಶ್ರೀ ಗೌರೀನಾಥ ಶಾಸ್ತ್ರಿಗಳ ‘ಸ್ವಾತಂತ್ರ್ಯದ ಅನಾದಿತ್ವ ಅಥವಾ ವೈದಿಕ ತಾಂತ್ರಿಕ ರಹಸ್ಯ’ ಎಂಬ ಗ್ರಂಥ ಸ್ವಾತಂತ್ರ್ಯದ ಹೆಚ್ಚಾಗಿ ಧಾರ್ಮಿಕ ಸ್ವಾತಂತ್ರ್ಯದ ಬೇರು ವೇದಗಳಲ್ಲಿ, ಅಲ್ಲಿಗಿಂತ ಸ್ಪಷ್ಟವಾಗಿ ಶಿವಾಗಮಗಳಲ್ಲಿ ಇಳಿದಿರುವವೆಂಬ ವಿಷಯವನ್ನು ಪ್ರಮಾಣಬದ್ಧವಾಗಿ ವಿವೇಚಿಸುವ ಹೊಸತೊಂದು ಪ್ರಯತ್ನವೆಂದು ಹೇಳಬಹುದು. ವೇದ ಮತ್ತು ಆಗಮಗಳಲ್ಲಿ ಪರಸ್ಪರ ವಿರೋಧವೆನಿಸಬಹುದಾದ ಭಾಗಗಳ

ಕೆಳ್ಳಲ್ಲಿ ತೋರಬಹುದು ಆದರೂ ತತ್ವತಃ ವೈದಿಕ ಮತ್ತು ತಾಂತ್ರಿಕ ಧರ್ಮಗಳಲ್ಲಿ ಐಕಮತ್ಯವೇ ಹೆಚ್ಚಾಗಿದೆಯೆಂಬ ವಿಷಯವನ್ನು ಶ್ರೀ ಶಾಸ್ತ್ರಿಗಳು ತರ್ಕಬುದ್ಧಿಗನುಗುಣವಾಗಿ ಪ್ರತಿಪಾದಿಸಿದ್ದಾರೆ ಮತ್ತೂ ಮುಂದೆ ಹೋಗಿ ವೈದಿಕ ತಾಂತ್ರಿಕ ಧರ್ಮವನ್ನು ಪರಿಶೀಲಿಸಿದರೆ ಜಾತ್ಯತೀತವಾದ ವಿಶ್ವಧರ್ಮ ಸರ್ವಸಮತೆ ಮತ್ತು ಸ್ವಾತಂತ್ರ್ಯಗಳ ಬೆಳಗನ್ನು ಬೀರುತ್ತ ೩ ೪ ಸಾವಿರ ವರ್ಷಗಳಿಂದಲೇ ಭರತಖಂಡದಲ್ಲಿ ಇತ್ತೆಂಬುದನ್ನು ಈ ಗ್ರಂಥವು ಬಯಲಿಗಿಡಲು ಹವಣಿಸಿದೆ ಎಲ್ಲಕ್ಕೂ ಹೆಚ್ಚಾಗಿ ಆಗಮಾಂತವೆನಿಸುವ ಅನಾದಿ ವೀರಶೈವ ಧರ್ಮದಲ್ಲಿ ವಿಶ್ವಧರ್ಮದ ಜಾತ್ಯತೀತ ಸ್ವಾತಂತ್ರ್ಯ ಸ್ಪಷ್ಟವಾಗಿ ತೋರುತ್ತಿದೆ ಎಂಬಂಶವನ್ನೂ ಶ್ರೀ ಶಾಸ್ತ್ರಿಗಳು ಪಂಡಿತರೊಪ್ಪುವಂತೆ ವಿವೇಚಿಸಿದ್ದಾರ

ಪುರಾತನ ಮತ್ತು ನೂತನ ಸಂಪ್ರದಾಯದಲ್ಲಿ ಬೆಳೆದ ಪಂಡಿತ ಗೌರೀನಾಥ ಶಾಸ್ತ್ರಿಗಳು ಸ್ವಾತಂತ್ರ್ಯದ ಅನಾದಿತ್ವವನ್ನು ತಮ್ಮದೇ ಆದ ಒಂದು ವಿಶಿಷ್ಟ ದೃಷ್ಟಿಯಿಂದ ನೋಡಿ ವೇದ ಮತ್ತು ಆಗಮಗಳನ್ನು ಸಮನ್ವಯಮಾಡಿ ಕನ್ನಡಿಗರಿಗೆ–ಅದರಲ್ಲಿ ಧರ್ಮಜಿಜ್ಞಾಸುಗಳಿಗೆ ಮತ್ತು 'ಜಾತ್ಯತೀತ ರಾಷ್ಟ್ರ' ಭಕ್ತರಿಗೆ ಬಹಳ ಉಪಕಾರ ಮಾಡಿದ್ದಾರೆಂದು ಹೇಳಬಹುದು ಈ ಗ್ರಂಥದಲ್ಲಿ ಹಲವಾರು ಸಂಗತಿಗಳನ್ನು ಸೂಸಿ ನೋಡಿ ಕಲಿಯತಕ್ಕ ವಿಷಯ ಬಹಳ ಇದೆ ಪಂಡಿತ ಗೌರೀನಾಥ ಶಾಸ್ತ್ರಿಗಳ ಶಾಸ್ತ್ರಪರಿಚಯ ಪರಿಶ್ರಮ ಸ್ತೋತ್ರಾರ್ಹವಾದುವು ಇಂತಹ ಪಂಡಿತರ ಲೇಖನಿಯಿಂದ ಇನ್ನೂ ಹೆಚ್ಚಿಗ ಸಂಶೋಧನ ಮತ್ತು ತುಲನಾತ್ಮಕ ದೃಷ್ಟಿಯ ಉದ್‌ಗ್ರಂಥಗಳು ಬರಲೆಂದು ಹಾರೈಸುತ್ತೇವೆ"

ಬೆಳಗಾಂವ

೧೫—೮—೧೯೫೭

---

**ಪ್ರೊ ಎ. ಎಲ್. ಹಿರೇಮಠ, ಎಂ ಎ,**
**ಲಿಂಗರಾಜ ಕಾಲೇಜ ಬೆಳಗಾಂವ, ಇವರ ಅಭಿಪ್ರಾಯ**

"ಧರ್ಮಕ್ಷೇತ್ರವಾದ ಭಾರತವರ್ಷದ ಆರ್ಷ ಸಂಪತ್ತಿಯ ಮೂಲವನ್ನು ಆಳವಾಗಿ ಅಭ್ಯಸಿಸಿ ಅದಗಿಸಿಕೊಂಡು ಶ್ರೀ ಪಂಡಿತ ಗೌರೀನಾಥ

ಶಾಸ್ತ್ರಿಗಳು 'ಸ್ವಾತಂತ್ರ್ಯದ ಆಸ್ವಾದಿಸ್ಸಿ ಅಥವಾ ವೈದಿಕ ತಾಂತ್ರಿಕ ರಹಸ್ಯ'ವೆಂಬ ವಿಚಾರಪರಿಪ್ಲುತವಾದ ಗ್ರಂಥವನ್ನು ಕನ್ನಡ ಜನಾಂಗಕ್ಕೆ ನೀಡಿದ್ದಾರೆ ಅಂದಿನ ಇಂದಿನ ಮತಾಂತರಗಳ ವಿಚಾರಕಲ್ಲೋಲಗಳ, ತಾಕಲಾಟಗಳ ಪರಿಣತಗಳನ್ನು ಕೂಲಂಕಷವಾಗಿ ಪರಿಷ್ಕರಿಸಿ, ಪಂಡಿತರು ಒಂದು ಹೊಸ ತೆರನಾದ ಅಮೋಘವಾದ ಪ್ರಯತ್ನವನ್ನು ಮಾಡಿದ್ದಾರೆ ಪ್ರಾಕ್ತನ ಪವಿತ್ರ ಪರಂಪರೆಯಿಂದ ಅನೇಕಾನೇಕ ಶತಮಾನಗಳಿಂದಲೂ ಬೆಳೆದು ಬಂದು ಪ್ರಪಂಚಕ್ಕೆ ಹೊಸ ಬೆಳಕನ್ನು ಬೀರುವ ಭಾರತೀಯ ಧಾರ್ಮಿಕ ವಿಚಾರ ಸ್ವಾತಂತ್ರ್ಯತೆಯು ಹೊಸತೇನೂ ಅಲ್ಲ ಅನೇಕ ಮತ ಮತಾಂತರಗಳೂ, ಪಂಥ ಪಂಗಡಗಳೂ ತಮ್ಮ ಮತವರ್ಗಗಳ ವೈಶಿಷ್ಟ್ಯತೆವನ್ನು ಕಂಡುಕೊಂಡಾಗ್ಯೂ ಒಂದೊಂದು ಪೃಥಕ್ಕರಿಸಲು ಬಾರದೇ ಇರಬಹುದಾದ ವೈದಿಕ ತಾಂತ್ರಿಕ ರಹಸ್ಯವು ಭಾರತೀಯರಿಗೆ ಇದ ಎಂಬುದು ಸಿದ್ಧವಾದ ಸಂಗತಿಯಾಗಿದೆ

ವೇದಾಗಮಗಳ ಗಹನವಾದ ಜಟಿಲವಾದ ಸಿದ್ಧಾಂತಗಳನ್ನು ಶೈವಧರ್ಮದ ಪ್ರಸಿದ್ಧ ಅಂಗವಾದ ವೀರಶೈವ ಧರ್ಮವು ಹೇಗೆ ಅಳವಡಿಸಿಕೊಂಡಿರುವದೆಂಬುದನ್ನು ಶಾಸ್ತ್ರಿಗಳು ಅನೇಕ ಪ್ರಮಾಣಗಳ ಮಾನದಂಡದಿಂದ ಅಳೆಯಲು ಪ್ರಯತ್ನಿಸಿದ್ದಾರೆ ಅವರ ತಾರ್ಕಿಕ ಸರಣಿ, ತತ್ವನಿಷ್ಪತ್ತಿಯಲ್ಲಿರುವ ಶ್ರದ್ಧೆ, ಧಾರ್ಮಿಕ ಪ್ರವೃತ್ತಿ, ಸಿದ್ಧಾಂತದಲ್ಲಿ ಅವರು ತೋರ್ಪಡಿಸಿದ ಪಾಂಡಿತ್ಯಪಟುತ್ವ ಈ ವಿಷಯ ವಿವೇಚನೆಗೆ ಪೋಷಕ ಶಕ್ತಿಗಳಾಗಿವೆ ಇಂದಿನ ಮನ್ವಂತರದ ವೈಜ್ಞಾನಿಕ ವಾತಾವರಣದಲ್ಲಿ ತತ್ವಾಭಿಜ್ಞದೀಪ್ತಿಯನ್ನು ಮೂಡಿಸಲು ಕಾರಣರಾಗಿದ್ದಾರೆ ವೀರಶೈವ ಧರ್ಮವು ಪ್ರಕರ್ಷಭೂಯಿಷ್ಠವಾದುದಾಗಿ ವಿಶ್ವಧರ್ಮವಾಗಲು ವಿಶ್ವತೋಮಾನ್ಯವಾಗಲು ಅದಕ್ಕಿರುವ ಅರ್ಹತೆಯನ್ನು ಬಿಚ್ಚುಮನಸ್ಸಿನಿಂದ ವಿಮರ್ಶಿಸಿದ್ದಾರೆ ಯಾವದೇ ಮತವು ಆದಿಯಾಗಿರಲಿ, ಅನಾದಿಯಾಗಿರಲಿ ಮಾನವಕುಲಕೋಟಿಯ ಸರ್ವಾಂಗೀಣ ವಿಕಾಸಕ್ಕೆ ಕಾರಣೀಭೂತವಾಗಿ ಸನಾತನ ಪರಾತ್ಪರ ಶಾಂತಿಯು ದೊರೆಯುವ ತತ್ವರಹಸ್ಯವು ಇಂದಿನ

ಜಗತ್ತಿಗೆ ಅತ್ಯಾವಶ್ಯವಿದೆ ಕಾರಣ ಇಂತಹ ಅಮೂಲ್ಯ ಗ್ರಂಥಭಾಂಡಾಗಾರದ ಉಪಯುಕ್ತತೆಯು ಅನಿವಾರ್ಯವಾಗಿದೆ

ಪಂಡಿತ ಗೌರೀನಾಥ ಶಾಸ್ತ್ರಿಗಳ ಈ ಗ್ರಂಥವು ಅವರ ಈ ಕಾರ್ಯತತ್ಪರತೆಯು ಆಧುನಿಕರಿಗೆ ಮಾರ್ಗದರ್ಶಕವಾಗಲಿ ಅವರ ಪರಿಶ್ರಮವು ಫಲೋದರ್ಕವಾಗಲಿ ವಿಶ್ವನಾಥನು ಪಂಡಿತರಿಗೆ ಯೋಗಕ್ಷೇಮವನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ

ಬೆಳಗಾಂವ

೧೫—೮—೧೯೫೭

---

ಅಖಿಲ ಭಾರತ ವೀರಶೈವ ವಿದ್ಯಾಪೀಠದ ಕಾರ್ಯಾಧ್ಯಕ್ಷರೂ,

ಸಾವಧಾನ ಸಂಪಾದಕರೂ ಆದ

**ಪಂ|| ನಾಗಭೂಷಣ ಶಾಸ್ತ್ರಿಗಳು ಗದಗ, ಇವರ ಅಭಿಪ್ರಾಯ**

ನಮ್ಮ ಭರತಖಂಡದಲ್ಲಿ ಅನೇಕ ಧಾರ್ಮಿಕ ಸಂಪ್ರದಾಯಗಳು ಬಹು ಪುರಾತನ ಕಾಲದಿಂದಲೂ ನಡೆದು ಬಂದಿವೆ ಅವುಗಳಲ್ಲಿ ಕೆಲವು ವೈದಿಕಗಳೆಂದೂ, ಕೆಲವು ಅವೈದಿಕಗಳೆಂದೂ ಹೇಳಿಸಿಕೊಳ್ಳುತ್ತಲಿರುವವು ಅವನ್ನೇ ಆರ್ಯ ದ್ರಾವಿಡ ಸಂಸ್ಕೃತಿಪ್ರಧಾನ ಧರ್ಮಗಳೆಂದು ಕರೆಯಬಹುದು ಅವುಗಳಲ್ಲಿ ವೀರಶೈವ ಧರ್ಮವು ಒಂದು ವಿಶಿಷ್ಟಸ್ಥಾನವನ್ನು ಪಡೆದುಕೊಂಡಿದೆ ಈ ಧರ್ಮವು ಇತರ ಎಲ್ಲ ಧರ್ಮಗಳಿಗಿಂತ ವಿಲಕ್ಷಣವೂ, ಸುಲಕ್ಷಣವೂ ಆಗಿರುವದೆಂದು ವಿಮರ್ಶಕರು ತಮ್ಮ ಬುದ್ಧಿಯ ಒರೆಗಲ್ಲಿಗೆ ಹಚ್ಚಿ ನೋಡಿದಾಗ ಕಂಡುಬರದಿರದು ಯಾಕಂದರೆ ಇದು ಆರ್ಯ-ದ್ರಾವಿಡ ಸಂಸ್ಕೃತಿಗಳ ಸುಂದರ ಸಮನ್ವಯ ರೂಪವಾಗಿರುತ್ತದೆ ಈ ಧರ್ಮವು ಯಾವದಾದರೊಂದು ಕಾಲದಲ್ಲಿ ಯಾವನಾದರೊಬ್ಬ ವ್ಯಕ್ತಿಯ ಬುದ್ಧಿವಿಶೇಷದಿಂದ ಹುಟ್ಟಿದ್ದಾಗಿರದೆ ಕಾಲಕಾಲಕ್ಕೂ ಅನುಭಾವಿಗಳಿಂದ ಸಂಸ್ಕಾರ ಪಡೆಯುತ್ತ ಒಂದು ಪೂರ್ಣ ಸ್ಥಿತಿಗೆ ಬಂದದ್ದಾಗಿದೆ ಆದಕ್ಕಾಗಿಯೇ ಈ ಧರ್ಮವು ಯಾವ ವ್ಯಕ್ತಿವಿಶೇಷದ ಧರ್ಮವೆಂದು ಹೇಳಿಸಿ

ಕೊಳ್ಳದೆ ಶಿವಧರ್ಮವೆಂದೇ ಕರೆಯಲ್ಪಡುವದು ಇಂಥ ಧರ್ಮದಲ್ಲಿ ಪ್ರಾಕೃತ ಧರ್ಮಗಳಲ್ಲಿದ್ದಂತೆ ಯಾವ ವರ್ಣಾಶ್ರಮಗಳ ಜಂಜಾಟವಿರುವ ದಿಲ್ಲ ಅದಕ್ಕಾಗಿಯೇ ಈ ಧರ್ಮಾನುಯಾಯಿಗಳಿಗೆ ಅತಿವರ್ಣಾಶ್ರಮ ಧರ್ಮಿಗಳೆಂದು ಹೇಳುವದುಂಟು ಇಂಥ ಈ ಧರ್ಮದ ಪರಿಪೂರ್ಣವಾದ ಸಂಸ್ಕಾರವನ್ನು ಪಡೆದವರೆಲ್ಲರೂ ಸಮಾನರಾಗಿರುವದಾದರೂ ಅಂಥ ಪೂರ್ಣ ಸ್ಥಿತಿಗೆ ಮುಟ್ಟುವತನಕ ಸಂಸ್ಕಾರಗಳ ಭೇದದಿಂದ ವ್ಯಕ್ತಿಗಳ ಲ್ಲಿಯೂ ತರತಮಭಾವವುಂಟಾಗುತ್ತಿರುವದು ಸ್ವಾಭಾವಿಕವೇ ಆದರೆ ಜನ್ಮತಃ ತರತಮಭಾವವನ್ನು ಕಲ್ಪಿಸುವದು ಅಷ್ಟು ಸಮಂಜಸವಾಗದು ಇದೇ ಅಭಿಪ್ರಾಯವನ್ನು ಪಂಡಿತ ಗೌರೀನಾಥ ಶಾಸ್ತ್ರಿಗಳವರು ಸ್ವಾತಂತ್ರ್ಯದ ಅನಾದಿತ್ವ ಎಂಬ ತಮ್ಮ ಗ್ರಂಥದಲ್ಲಿ ಸಾಧಾರವಾಗಿ ಚನ್ನಾಗಿ ವಿಮರ್ಶಿಸಿ ನಿರೂಪಿಸಿದ್ದಾರೆ ಇವರು ಸಣ್ಣಹಳ್ಳಿಯಲ್ಲಿ ಬೇರೆ ವ್ಯವಸಾಯವನ್ನು ಮಾಡುತ್ತ, ಧಾರ್ಮಿಕ ಗ್ರಂಥಗಳನ್ನು ಪರಿಶೀಲಿಸುತ್ತಿರುವದನ್ನು ನೋಡಿದರೆ ಇವರ ಬುದ್ಧಿವೈಭವದ ಕಲ್ಪನೆಯು ಎಲ್ಲರಿಗೂ ಚನ್ನಾಗಿಯೇ ಆಗುವದು ಇವರನ್ನು ನಾನು ಹಾಲಕೆರೆಯ ಶ್ರೀ ಅನ್ನದಾನ ಸ್ವಾಮಿಗಳ ವಾರಶಾಲೆಯಲ್ಲಿ ವಿದ್ಯಾರ್ಥಿಯಾಗಿರುವಾಗಿನಿಂದಲೂ ಬಲ್ಲೆನು ಇವರು ಆಗ ಪ್ರೌಢ ವಿದ್ಯಾರ್ಥಿಗಳಾಗಿದ್ದು ಎಲ್ಲರ ಮನ್ನಣೆಗೆ ಪಾತ್ರರಾಗಿದ್ದರೂ, ಬಾಲ್ಯದಿಂದಲೂ ವಿಮರ್ಶಕ ಬುದ್ಧಿಯಿಂದಲೇ ಅಭ್ಯಾಸ ಮಾಡುತ್ತ ಬಂದವರಾಗಿದ್ದಾರೆ ಇಂಥ ಪಂಡಿತರು ಹೆಚ್ಚಾಗಿ ಅವಕಾಶ ದೊರಕಿಸಿಕೊಂಡು ಧರ್ಮಗ್ರಂಥಗಳನ್ನೂ, ಸಿದ್ಧಾಂತ ಗ್ರಂಥಗಳನ್ನು ಅಭ್ಯಾಸಮಾಡಿ ಗ್ರಂಥ ಬರೆಯಹತ್ತಿದರೆ ಸಮಾಜಕ್ಕೂ ತದ್ವಾರಾ ಕನ್ನಡ ನಾಡಿಗೂ ಮಹದುಪಕಾರವಾಗುವದೆಂದು ನನ್ನ ಅಭಿಪ್ರಾಯ ಪಂಡಿತ ಗೌರೀನಾಥ ಶಾಸ್ತ್ರಿಗಳಿಗೆ ದೇವರು ಆಯುರಾರೋಗ್ಯ ಭಾಗ್ಯವನ್ನು ದಯಪಾಲಿಸಿ ಅವರಿಂದ ಹೆಚ್ಚಿನ ಸೇವೆ ಸಲ್ಲುವಂತೆ ಮಾಡಲೆಂದು ಹಾರೈಸುವೆ

ಗದಗ

೧೫—೮—೧೯೫೩

ಜ ಸಿದ್ಧಲಿಂಗ ಪರಬ್ರಹ್ಮಣೇನಮಃ

## ಪಂ ಬಸವರಾಜ ಶಾಸ್ತ್ರಿ ಬೃಹನ್ಮಠ, ಪಗಡದಿನ್ನಿ

ವ್ಯಾಕರಣತೀರ್ಥ, ವ್ಯಾಕರಣರತ್ನ, ವ್ಯಾಕರಣಶಾಸ್ತ್ರಿ, ಸಾಹಿತ್ಯ ಶಿರೋಮಣಿ, ಪ್ರಧಾನಾಧ್ಯಾಪಕ ಜಗದ್ಗುರು ತೋಂಟದಾರ್ಯ ಸಂಸ್ಕೃತ ಪಾಠಶಾಲಾ, ಗದಗ

## ಇವರ ಅಭಿಪ್ರಾಯ

ಮಾನವನು ಅಪಾರವಾದ ಸಂಸಾರ ಸಾಗರದಲ್ಲಿ ಮುಳುಮುಳುಗಿ ತೇಲುತ್ತ ಕುಂಬಾರನ ತಿಗುರಿಯಂತೆ ಗರಗರನೆ ತಿರುಗುತ್ತಿರುವ ಜನನ ಮರಣ ರೂಪವಾದ ಭವಚಕ್ರದಲ್ಲಿ ಸಿಲುಕಿ, ಕಂದಿ ಕುಂದಿ, ಬೆಂದು ಬೆಂಡಾಗಿ, ಬೇಸತ್ತು ನಿಂದವನಾಗಿ ಇದೇ ಜನ್ಮವನ್ನು ಕಡೆಯದಾಗಿ ಮಾಡಿಕೊಳ್ಳಬೇಕೆಂಬ ಪರಿಪಕ್ವ ಬುದ್ಧಿಯುಳ್ಳವನಾಗಿ "ಮಹಾಜನೋ ಯೇ ನಗತಃಸಪಂಥಾಃ" ಎಂಬ ಮಟ್ಟಕ್ಕೆ ಬಂದವನಾಗಿ ಯಾವ ಮಾರ್ಗ ವನ್ನು ಅನುಸರಿಸುವನೋ ಅದೇ ಧರ್ಮವು ಈ ಧರ್ಮವು ಭಿನ್ನ ಭಿನ್ನ ರುಚಿಯುಳ್ಳ ಮನು-ಮುನಿಗಳಿಂದಲೂ, ಆಚಾರ್ಯರಿಂದಲೂ, ಪ್ರಮಥ ಪುಂಗವರಿಂದಲೂ ನಾನಾ ವಿಧವಾಗಿ ಪ್ರತಿಪಾದಿಸಲ್ಪಟ್ಟಿರುತ್ತವೆ ಇಂಥ ಅನೇಕ ಧರ್ಮಗಳಲ್ಲಿ ಶೈವಧರ್ಮವು ಅತಿಪ್ರಾಚೀನವೂ, ಸರ್ವತ್ರವ್ಯಾಪ ಕವೂ, ಸರ್ವಮಾನ್ಯವೂ, ಸರ್ವಶ್ರೇಷ್ಠವೂ ಆಗಿರುತ್ತದೆಂಬುದು ನಿರ್ವಿ ವಾದವು ಇಂತಹ ಜಗನ್ಮಾನ್ಯವಾದ ಶೈವಧರ್ಮದ ಸಾರರೂಪ ಅರ್ಕ ದಂತಿರುವ ವೀರಶೈವ ಧರ್ಮವು ವಿಶ್ವವ್ಯಾಪಕವಾದುದೂ, ವಿಶ್ವಮಾನ್ಯ ವಾದುದೂ ಎಂದು ಪ್ರತ್ಯೇಕವಾಗಿ ಹೇಳಬೇಕಾದುದೇ ಉಳಿದಿರುವದಿಲ್ಲ, ಅದು ಸ್ವತಸ್ಸಿದ್ಧವಾಗಿದೆ ಈ ವೀರಶೈವ ಧರ್ಮವು ಪರಶಿವನ ನಿಶ್ವಾಸ ರೂಪಗಳಾದ ವೇದಗಳಲ್ಲಿಯೂ, ಸ್ಪಷ್ಟೋಚ್ಚಾರ ರೂಪಗಳಾದ ಶಿವಾ-ಗಮಗಳಲ್ಲಿಯೂ ಪ್ರತಿಪಾದಿಸಲ್ಪಟ್ಟಿರುತ್ತದೆ ನಿಶ್ವಾಸರೂಪವಾದ ವೇದದ ಅರ್ಥವು ಸಂಶಯಕ್ಕೆ ಆಸ್ಪದವಾದಾಗ್ಗೆ ಮುಕ್ತಕಂಠದಿಂದ ಹೇಳಿದ ಶಿವಾ-ಗಮಗಳಿಂದಲೇ ಆ ಸಂಶಯವು ಪರಿಹರಿಸಲ್ಪಡುವುದರಿಂದ ಶಿವಾಗಮಗ

ಕಿನ್ನೇ ಪ್ರಾಧಾನ್ಯವಾಗಿಟ್ಟುಕೊಂಡ ವೀರಶೈವವು "ತಾಂತ್ರಿಕ ವೈದಿಕ" ವೆಂದು ಸುಪ್ರಸಿದ್ಧವಾಗಿದೆ ವೇದಗಳು ಪರಶಿವನ ನಿಶ್ವಾಸರೂಪವಾಗಿ ಪ್ರಕಟವಾದರೆ ಆಗಮಗಳು ಆ ಪರಶಿವನ ತಾಲು ಓಷ್ಠ ದಂತಾದಿಗಳ ಸ್ಫುರಣರೂಪ ಸ್ಪಷ್ಟೋಚ್ಚಾರಗಳಾಗಿ ಹೊರಹೊರಟಿರುವದರಿಂದ ಏಕಕರ್ತೃಕಗಳಾದ ಕಾರಣ ಆ ಶಿವಾಗಮಗಳ ಕಾಲವೂ, ಆ ಶಿವಾಗಮಗಳ ಪ್ರಾಮಾಣ್ಯವೂ ವೇದಗಳಿಗೆ ಸಮಾನವಾದುದೆಂದು ಕರತಲಾಮಲಕವಾಗಿದೆ ಇದಕ್ಕೆ

"ಶಿವಾಗಮಾಶ್ಚ ವೇದಾಶ್ಚ ನಿತ್ಯಾ ಏವಪ್ರಮಾಣತಃ
ನಿತ್ಯಾ ಶಿವಾಗಮಾವೇದ್ಯೈಃ ಶಿವೇನಾದಾವಭೇದತಃ
ನಿತ್ಯಸ್ಥಿತಾಸ್ತ್ವಭಿವ್ಯಕ್ತಾಸ್ತಸ್ಮಿಂಸ್ತೇಽನಾದಯೋಯತಃ ‖ ಎಂದು
—ಈಶಾನಶಿವಾಚಾರ್ಯ ಕೃತ ಪದ್ಧತಿ ಗ್ರಂಥೇ

ಶ್ವಸಿತಾನಾಂ ಶ್ರುತೀನಾಂ ಚೇತ್ತಾದೃಶೋಮಹಿಮಾಯದಿ ।
ತಾಲ್ವೋಷ್ಠಪುಟ ನಿಷ್ಪಂದ ಪುರಸ್ಸರಮುದೀರಿತೇ ।
ಆಗಮೇ ಶಿವವಕ್ತ್ರೋದ್ಧೇ ವಕ್ತವ್ಯೋಮಹಿಮಾಕಿಯಾನ್ ‖ ಎಂದು
ಕ್ರಿಯಾಸಾರ ಉ ೨೯ ಇವು ಪ್ರಮಾಣವು

ಇದರಿಂದ ಶಿವಾಗಮಗಳ ಕಾಲವು ಪುರಾಣ, ಸ್ಮೃತಿ, ಉಪನಿಷತ್ತುಗಳ ಕಾಲಕ್ಕಿಂತಲೂ ಪ್ರಾಚೀನವಾದುದೆಂಬುದು ದಂಡಾಪೂಪಿಕ ನ್ಯಾಯದಿಂದ ಸಿದ್ಧವಾಗುವದು ಇದನ್ನು ಗ್ರಂಥಕಾರರು ಅನೇಕ ಪ್ರಮಾಣಗಳನ್ನು ಕೊಟ್ಟು ತೋರಿಸಿರುವರು ತಾಂತ್ರಿಕ ವೈದಿಕವಾದ ವೇದಾಗಮಗಳಲ್ಲಿ ಹೇಳಲ್ಪಟ್ಟ ವೀರಶೈವವು "ಶ್ರೌತ" "ಸ್ವತಂತ್ರ" ಎಂದು ಎರಡು ವಿಧವಾಗಿದೆ ಅಪ್ರಾಕೃತ ವರ್ಣಾಶ್ರಮ ಬದ್ಧವಾದುದು "ಶ್ರೌತ" ಎಂದೂ, ಆ ವರ್ಣಾಶ್ರಮರಹಿತವಾದುದು "ಸ್ವತಂತ್ರ" ಎಂದೂ ಹೇಳಲ್ಪಡುತ್ತದೆ ವೀರಶೈವರಲ್ಲಿ ವರ್ಣಾಶ್ರಮಗಳುಂಟೆಂದ ಕೂಡಲೇ ಕೆಲವರಿಗೆ ತಾಪವಾಗುವದು ಪರಂತು ಈ ವರ್ಣಾಶ್ರಮಗಳು ಪ್ರಾಕೃತಗಳೋ ಅಪ್ರಾಕೃತಗಳೋ ಎಂಬುದನ್ನು ಅವರು ವಿಚಾರಿಸಿಲ್ಲ ಪ್ರಾಕೃತ ವರ್ಣಾಶ್ರಮಗಳನ್ನು ಹೇಳಿದರೆ ಆ ರೀತಿ ತಾಪಗೊಳ್ಳಲಿ, ಅಪ್ರಾಕೃತ ವರ್ಣಾಶ್ರಮಗಳನ್ನು ಹೇಳಿದರೆ ತಾಪವೇಕೆ? ವೀರಶೈವರಲ್ಲಿ ಅಪ್ರಾಕೃತ ವರ್ಣಾ

ಶ್ರಮಗಳುಂಟೆಂಬ ಬಗ್ಗೆ ಚಂದ್ರಜ್ಞಾನಾಗಮ ಸಿದ್ಧಾಂತ ಶಿಖಾಮಣಿ, ಕ್ರಿಯಾಸಾರ, ಧರ್ಮಶಿರೋಮಣಿ ಮೊದಲಾದ ಗ್ರಂಥಗಳಲ್ಲಿ ಅನೇಕ ಪ್ರಮಾಣಗಳುಂಟು ಅವುಗಳನ್ನು ಗ್ರಂಥಕಾರರೇ ವಿಪುಲವಾಗಿ, ಸುಸ್ಪಷ್ಟ ವಾಗಿ, ಸುಲಲಿತವಾಗಿ ತೋರಿಸಿರುವುದರಿಂದ ನಾನು ಪಿಷ್ಟ ಪೇಷಣವನ್ನು ಮಾಡುವದಿಲ್ಲ ತಾಪಗೊಳ್ಳುವವರು ಮೇಲೆ ಲಿಖಿಸಿದ ಗ್ರಂಥಗಳನ್ನು ಯಾವುದಾದರೊಂದು ಕಾರಣದಿಂದ ಒಪ್ಪಲಿ, ಒಪ್ಪದಿರಲಿ, ಆದರೆ ವಿರಕ್ತ ರಲ್ಲಿಯೇ ಅಗ್ರಗಣ್ಯರೂ, ಪರಿಪೂರ್ಣ ಪಾಂಡಿತ್ಯವುಳ್ಳವರೂ, ಉಭಯ ಭಾಷಾವಿಶಾರದರೂ ಆದ ಶ್ರೀಮನ್ಮರಿತೋಂಟದಾರ್ಯರು ತಾವು ಸಂಸ್ಕೃತ ಭಾಷೆಯಲ್ಲಿ ರಚಿಸಿದ ಅತ್ಯಂತ ಪ್ರೌಢವಾದ "ವೀರಶೈವಾನಂದ ಚಂದ್ರಿಕೆ" ಎಂಬ ಗ್ರಂಥದ ೪೫೪ ನೆಯ ಪುಟದಲ್ಲಿ "ಸರ್ವವರ್ಣೋತ್ತಮಾನಾಮ ಪ್ರಾಕೃತ ಬ್ರಾಹ್ಮಣಾದಿ ಧರ್ಮನಿರತತಯಾ ಪರಿದೃಶ್ಯಮಾನಾನಾಂ ವೀರಶೈವಾನಾಂ ಸರ್ವೋತ್ತಮತ್ವಂ ನಿರ್ವಿವಾದಂ" ಯಾವತ್ತೂ ಪ್ರಾಕೃತ ವರ್ಣಗಳಿಗಿಂತಲೂ ಮಿಗಿಲಾಗಿಯೂ, ಅಪ್ರಾಕೃತ ಬ್ರಾಹ್ಮಣಾದಿ ಧರ್ಮ ಗಳಲ್ಲಿ ನಿರತರಾಗಿಯೂ ಇರುವ ವೀರಶೈವರಿಗೆ ಸರ್ವೋತ್ತಮತ್ವವು ಸಹಜ ಸಿದ್ಧವಾಗಿದೆ ಎಂದು ಹೇಳಿರುವದನ್ನು ಚನ್ನಾಗಿ ತಿಳಿದುಕೊಂಡು ತಮ್ಮ ತಾಪವನ್ನು ಕಡಿಮೆ ಮಾಡಿಕೊಳ್ಳಬೇಕು

ಸ್ವತಂತ್ರ ವೀರಶೈವವು ವರ್ಣಾಶ್ರಮರಹಿತವಾದುದು, ಆದುದರಿಂ ದಲೇ ಧರ್ಮಶಿರೋಮಣಿಯಲ್ಲಿ "ಬ್ರಾಹ್ಮಣಾದಿ ವರ್ಣಾನಾಮೇತನ್ಮತ ಪ್ರವಿಷ್ಟಾನಾಂ ವರ್ಣಭೇದೋನಾಸ್ತೀತಿ ಪ್ರತೀಯತೆ" ವೀರಶೈವ ಧರ್ಮ ದಲ್ಲಿ ಸಮಾವಿಷ್ಟರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಾದಿ ಪ್ರಾಕೃತ ವರ್ಣಗಳಿಗೆ ಅಪ್ರಾಕೃತ ಶಿವದೀಕ್ಷೆಯಾದ ಬಳಿಕ ಆ ಹಿಂದಿನ ವರ್ಣ ಭೇದವೇ ಇಲ್ಲವಾಗುತ್ತದೆ ಸರ್ವರೂ ಸಮಾನರಾಗಿ ವರ್ತಿಸತಕ್ಕದ್ದು ಅಗ್ನಿಯಲ್ಲಿ ದಗ್ಧಗಳಾದ ನಾನಾ ಜಾತಿಯ ಕಟ್ಟಿಗೆಗಳು ಭಸ್ಮ ಎಂಬ ಏಕ ರೂಪವನ್ನು ಹೊಂದುವಂತೆ, ದೀಕ್ಷಾ ಸಂಸ್ಕಾರವೆಂಬ ಅಗ್ನಿಯಿಂದ ಮಾಂಸ ಪಿಂಡವು ನಾಶವಾಗಿ ಮಂತ್ರಪಿಂಡವಾದ ಬಳಿಕ ಆ ಹಿಂದಿನ ಜಾತಿ, ಕುಲ, ಧರ್ಮ ಮೊದಲಾದವುಗಳೆಲ್ಲವೂ ನಾಶವಾಗುವವು ಆದುದರಿಂದ ಸರ್ವರೂ

ಸಮಾನ ಅಧಿಕಾರ ಮತ್ತು ಧರ್ಮಸ್ವಾತಂತ್ರ್ಯವುಳ್ಳವರಾಗುತ್ತಾರೆ ಇದನ್ನು ಗ್ರಂಥಕಾರರು ಬಹು ಮಾರ್ಮಿಕವಾಗಿ ವಿವರಿಸಿರುವರು ಈ ಗ್ರಂಥದ ಪ್ರತಿಯೊಂದು ಪಂಕ್ತಿಯು ಅರ್ಥಪೂರ್ಣವಾಗಿಯೂ, ಆಧಾರ ಯುಕ್ತವಾಗಿಯೂ ಇರುತ್ತದೆ ಈ ಗ್ರಂಥವು ಚಿಕ್ಕದಾದರೂ ಗೂಢವಾದ ಅನೇಕ ಪ್ರಮಾಣಗಳಿಂದೊಡಗೂಡಿದೆ ವಿಮರ್ಶಕರಿಗೆ ಜಿಜ್ಞಾಸುಗಳಿಗೆ, ಸಂದೇಹಗ್ರಸ್ತರಿಗೆ ಮಾರ್ಗದರ್ಶಕವಾಗಿದೆ ಪಂ ಗೌರೀನಾಥ ಶಾಸ್ತ್ರಿಗಳು ಈ ಗ್ರಂಥ ನಿರ್ಮಾಣಕ್ಕಾಗಿ ಅನೇಕ ಇತರ ಗ್ರಂಥಗಳನ್ನು ಅವಲೋಕನ ಮಾಡಿರುವದೂ, ಅವುಗಳ ಸಮನ್ವಯವು ಸೋಪಸ್ತಂಭಕವಾಗಿ ಸಂಯೋಜನಗೊಳಿಸಿದ ರೀತಿಯೂ ಬಹು ಪ್ರಶಂಸನೀಯವಾಗಿದೆ ಕನ್ನಡ ಮತ್ತು ಸಂಸ್ಕೃತದ ಮುಖ್ಯ ಗ್ರಂಥಗಳಲ್ಲಿಯ ಅತ್ಯುಪಯುಕ್ತವಾದ ಎಷ್ಟೋ ಆಧಾರಗಳು ಈ ಚಿಕ್ಕ ಪುಸ್ತಕದ ಅವಲೋಕನದಿಂದ ವಿದಿತಗಳಾಗುತ್ತವೆ ಈ ಗ್ರಂಥವು ಚಿಕ್ಕದಾದರೂ ಅತ್ಯಾದರದಿಂದ ಸಂಗ್ರಹಿಸಲಿಕ್ಕೆ ಯೋಗ್ಯವಾಗಿದೆ ಇದನ್ನು ಮನದಂದು ವೀರಶೈವ ಜನಾಂಗವು ಈ ಗ್ರಂಥದ ಪುನರ್ಮುದ್ರಣವಾಗುವಂತೆ ಅತ್ಯಾತುರದಿಂದ ಇದಕ್ಕೆ ಸಹಾಯ ನೀಡಿದಲ್ಲಿ ಶಾಸ್ತ್ರಿಗಳವರ ಪರಿಶ್ರಮವು ಸಾರ್ಥಕವಾಗುವದು ಪಂಡಿತ ಗೌರೀನಾಥ ಶಾಸ್ತ್ರಿಗಳವರಿಗೆ ಇತೋಪ್ಯತಿಶಯವಾದ ಉತ್ಸಾಹ ಶಕ್ತಿಯನ್ನೂ, ನೂತನ ಸಂಶೋಧನ ಚಾತುರ್ಯವನ್ನೂ, ಆ ದಯಾಘನನಾದ ಶ್ರೀ ಸಿದ್ಧಲಿಂಗೇಶನು ಕರುಣಿಸಲೆಂದು ಅನನ್ಯಭಾವನೆಯಿಂದ ಪ್ರಾರ್ಥಿಸುತ್ತೇನೆ

ಗದಗ

೧೫—೮—೧೯೫೩

---

ಶ್ರೀಶಿವಯೋಗ ಮಂದಿರ ಸಂಸ್ಥಾಪಕ ಶ್ರೀಗುರು ಕುಮಾರೇಶ ಪ್ರಸೀದ

**ಶ್ರೀ ಶಿವಲಿಂಗ ಸ್ವಾಮಿಗಳು ಸಂಸ್ಥಾನಮಠ ಪಡುಸಲಗಿ ಇವರ ಅಪ್ಪಣೆ**

"ಕಾಟಾಪೂರ ಹಿರಿಮಠದ ಪಂ|| ವೇ|| ಗೌರೀನಾಥ ಶಾಸ್ತ್ರಿಗಳು ಇಲಾಳ ಇವರು ಬರೆದ ಸ್ವಾತಂತ್ರ್ಯದ ಅನಾದಿತ್ವ ಅಥವಾ ವೈದಿಕ

ತಾಂತ್ರಿಕ ರಹಸ್ಯವನ್ನು ನೋಡಿ ಪರಮಸಂತೋಷವಾಯಿತು ಸಮಾಜದಲ್ಲಿಯ ವಿಶಾಲದೃಷ್ಟಿ ಬೆಳೆದು, ಸಮಾನತೆ ಮತ್ತು ಸ್ವತಂತ್ರತೆ ಹೆಚ್ಚಾಗಲೆಂಬ ಹೆಬ್ಬಯಿಕೆಯಿಂದ ಪಂಡಿತ ಶಾಸ್ತ್ರಿಗಳು ತಮ್ಮ ಬಹುದಿನದ ತಪಃಫಲದಿಂದ ಉತ್ತಮವೂ, ಲೋಕೋಪಕಾರಕವೂ ಆದ ಈ ಸತ್ಕೃತಿಯನ್ನು ವೀರಶೈವ ಜಗತ್ತಿಗೆ ಕೊಟ್ಟು ಮಹೋಪಕಾರ ಮಾಡಿದ್ದಾರೆ

ಅನಂತ ಶೃತಿ ಸ್ಮೃತಿ ಸಿದ್ಧಾಂತ ಪ್ರಮಾಣಗಳನ್ನೊಳಗೊಂಡು ವೀರಶೈವದ ನಿಜತತ್ವವನ್ನು ನೈಜದೃಷ್ಟಿಯಿಂದ ಸಮನ್ವಯಿಸಿ ಅದರ ಪುರಾತನತ್ವವನ್ನು ಬಹು ಪ್ರಾಚೀನದವರೆಗೂ ವಿಮರ್ಶಿಸಿ ನವೀನ ಜಗತ್ತಿಗೆ ಅದರ ಭೂಮವಾದ ದಿವ್ಯಮಾರ್ಗವನ್ನು ತಿಳಿಗನ್ನಡದಲ್ಲಿ ತಿಳಿಸಿದ ಮಾನ್ಯ ಗೌರೀನಾಥ ಪಂಡಿತರು ಕನ್ನಡ ಕುಲಭೂಷಣರಾಗಿದ್ದಾರೆ

ಈಗಿನ ಸಮಾಜ ವಿಘಾತಕಗಳಾದ ಯಾವ ಪಕ್ಷ ಪಂಗಡಗಳ ಬಲೆಗೆ ಸಿಲುಕದೆ ಹಿಂದಿನ ಹಿರಿಯರ ಉದಾರತೆಯನ್ನು ಆದರ್ಶವಾಗಿಟ್ಟುಕೊಂಡು ಭಗವತ್ಪಾದ ರೇಣುಕಾದಿಗಳಾದ ಹಾಗು ಬಸವಾದಿ ಪ್ರಮಥರಿಂದ ಪರಂಪರವಾಗಿ ಪ್ರಬೋಧಿಸುತ್ತ ಬಂದ ವೀರಶೈವವನ್ನು ಪರಮತೀಯ ಪಂಡಿತರಿಗೂ ತಿಳಿಯುವಂತೆ ಸುಂದರವಾಗಿ ಬರೆದ ಶಾಸ್ತ್ರಿಗಳಿಂದ ಲಿಂಗವಂತ ಸಮಾಜ ಚಿರಋಣಿಯಾಗಿದೆ

ಸ್ವಾತಂತ್ರ್ಯ ಅನಾದಿತ್ವ ಮತ್ತು ವೈದಿಕ ಹಾಗು ತಾಂತ್ರಿಕ ಇವೇ ಮೊದಲಾದ ಪದಾರ್ಥಗಳ ವಿವೇಚನೆಯನ್ನು ವೀರಶೈವ ಪಾರಿಭಾಷಿಕೆಯಲ್ಲಿ ವಿವೇಕದಿಂದ ವಿವೇಚಿಸಿ, ತಮ್ಮ ಅಗಾಧ ಅನುಭವಜ್ಞಾನದೊಡನೆ ಪ್ರತಿಭೆಯ ಪ್ರಭೆಯನ್ನು ಜಿಜ್ಞಾಸುಗಳ ಮೇಲೆ ಚೆಲ್ಲಿದ್ದಾರೆ

ಇಂಥ ಅನೇಕ ಕೃತಿಗಳು ಹೆಚ್ಚಾಗಿ ಇವರಿಂದ ಹೊರಹೊರಟು ಇಂದಿನ ಹೊಸಯುಗಕ್ಕೆ ಹೊಂಬೆಳಕನ್ನೀಯಲೆಂದು ಶಾಸ್ತ್ರಿಗಳಿಗೆ ಪರಮೇಶ್ವರನು ಆಯುರಾರೋಗ್ಯ ಸಂಪದಗಳನ್ನು ಹೆಚ್ಚಿಸಲೆಂದು ಹಾರೈಸಿ ಹರಿಸಿದ್ದೇವೆ

**ಇತ್ಯಾಶಿಷಃ**

**ಪಡಸಲಗಿ**

೧೫—೮—೧೯೫೨

ಶ್ರೀಗುರು ಸಿದ್ಧಲಿಂಗಸ್ವಸ್ವರ್ಥ

## ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು ಸಖರಾಯಪಟ್ಟಣ
## ಇವರ ಅಪ್ಪಣೆ

ಮಂಗಲಪೂರ್ವಕ ಸೂಚಿಸುವದು ನೀವು ಸಾದರಭಕ್ತಿ ಪಿತ್ಸ್ವಾಭಿಮಾನವಿರಿಸಿ ಕಳುಹಿದ "ಸ್ವಾತಂತ್ರ್ಯದ ಅನಾದಿತ್ವ ಅದವಾ ವೈದಿಕ ತಾಂತ್ರಿಕ ರಹಸ್ಯ" ಎಂಬೀ ಗ್ರಂಥವು ಕೈಸೇರಿತು ಒಹು ಪರಿಶ್ರಮವಹಿಸಿ ವೇದಾಗಮೋಪನಿಷದ್ ಭಾಷ್ಯೇತಿಹಾಸ ಪುರಾಣ ಶಾಸನಾದಿ ಆಧಾರಗಳನ್ನು ಸಂಗ್ರಹಿಸಿ ಒಹುಪುಟ್ಟಿಗೆ ಸಮಂಜಸವಾದ ವಿವರಣೆಗಳಿಂದ ಪ್ರಕಾಶಕ್ಕೆ ತಂದಿರುವ ನಿಮ್ಮೀ ಕಾರ್ಯವು ಬಹಳ ಸ್ತುತ್ಯ ವಾದುದೆಂದು ಹೇಳದಿರಲಾರವು ಇದೇ ರೀತಿ ಪರಿಶೋಧನಾ ಕಾರ್ಯ ದಲ್ಲಿ ಇತೋಪ್ಯತಿಶಯವಾದ ಬುದ್ಧಿಶಕ್ತಿ ಸಾಹಸಾನುಕೂಲಗಳನ್ನು ಶ್ರೀಗುರು ಮಹಾದೇವನು ಅನುಗ್ರಹಿಸಿ ಕಾಪಾಡಲೆಂದು ಹಾರೈಸಲಾಗಿವ ತಜ್ಞಾನುಭವಜ್ಞ ಪಂಡಿತರಿಗೆ ಈ ಮೂಲಕ ವಿಶೇಷ ಸೂಚಿಸುವದೇನಿವ

**ಪರೇಶಃ ಪಾತುನೋಽವಃ**

ಶ್ರೀಗುರು ಕುಮಾರಾಶ್ರಮ
ಗಿರಿಯಾಪುರ
೧೫—೮—೧೯೫೦

---

## ಶ್ರೀ ನಿ ಪ್ರ. ಬಸವಲಿಂಗ ಸ್ವಾಮಿಗಳು ಗವಿಮಠ, ನವಿಲುಗುಂದ
## ಇವರ ಅಪ್ಪಣೆ

ಪಂಡಿತ ಗೌರೀನಾಥ ಶಾಸ್ತ್ರಿಗಳು ಒರೆದ ವೈದಿಕ ತಾಂತ್ರಿಕ ರಹಸ್ಯ" ಗ್ರಂಥವನ್ನು ಸಂಪೂರ್ಣವಲ್ಲದಿದ್ದರೂ ಅಲ್ಲಲ್ಲಿ ನೋಡಿದ್ದಾಯಿತು ಗ್ರಂಥ ಕರ್ತರು ವಿಶಾಲದೃಷ್ಟಿಯನ್ನಿಟ್ಟುಕೊಂಡು ನಾಗಿದ್ದಾರೆಂಬುದು ಸಂತೋಷ ಸಂಗತಿ

ವೀರಶೈವ ಧರ್ಮದಲ್ಲಿ ಸಮಾವಿಷ್ಟರಾದೆಲ್ಲರಿಗೂ ಇರುವ ಸ್ವತಂತ್ರತೆ ಸಮಾನತೆಗಳು ಎತ್ತಿ ತೋರಿಸಲ್ಪಟ್ಟಿವೆ ಹಾಗು ಧಾರ್ಮಿಕ ಸ್ವಾತಂತ್ರ್ಯದ ಅನಾದಿತ್ವವು ಸಾಕಷ್ಟು ಪ್ರಮಾಣಗಳಿಂದ ಪ್ರತಿಪಾದಿತವಾಗಿವೆ ಕಾರಣ ಎಲ್ಲರೂ ಈ ಗ್ರಂಥವನ್ನು ಓದಿ ತಿಳಿದು ಸಾಧ್ಯವಾದ ಆಚರಣೆಗೆ ತರುವದು ಅತ್ಯಗತ್ಯ

**ನವಿಲುಗುಂದ**

೧೫—೮—೧೯೫೨

---

## ಶ್ರೀ ಮ ನಿ ಪ್ರ ಹಾನಗಲ್ ಶ್ರೀ ಸದಾಶಿವಸ್ವಾಮಿಗಳು ಶಿವಯೋಗ ಮಂದಿರ, ಇವರ ಅಪ್ಪಣೆ

ಜಗತ್ತಿನಲ್ಲಿ ಅತಿಮಾನವರು ಪರಮಾತ್ಮನ ಅನುಗ್ರಹದತ್ತವಾದ ಬುದ್ಧಿ ಪ್ರಭೆಯಿಂದ ಜಗತ್ಕಲ್ಯಾಣಕರಗಳಾದ ವಿಶಾಲತತ್ವಗಳನ್ನು ಕಂಡುಕೊಂಡು ಆ ಅಮೋಘವಾದ ತತ್ವಗಳಿಂದ ವಿಶಾಲವಾದ ಧರ್ಮಗಳನ್ನು ಕಟ್ಟುತ್ತ ಬಂದಿರುವರು ಅಷ್ಟೇ! ಈ ತತ್ವಜಿಜ್ಞಾಸೆ ಮೊಟ್ಟಮೊದಲು ಪ್ರಾರಂಭಿಸುವ ಸುಯೋಗವು ಭಾರತಕ್ಕೆ ಲಭಿಸಿತು ಇದೊಂದು ಹೆಮ್ಮೆಪಡುವ ಮಾತು ಅಂದಿನಿಂದ ಇಂದಿನವರೆಗೂ ಅನೇಕ ಮಂದಿ ದಾರ್ಶನಿಕರು ಶರಣಪುಂಗವರು, ಆಚಾರ್ಯರು ಜನ್ಮವೆತ್ತಿ ಮತಗಳನ್ನು ನೆರಿವಡಿಸುತ್ತ ಬಂದಿರುವರು ಇದು ನಿದರ್ಶನವಿದೆ ಅಂದಮೇಲೆ ಈ ಸುಧಾರಣೆಯು ಪರಂಪರಯಿಂದ ಧರ್ಮ (ಮತ) ವು ಅನಾದಿಯೆಂದು ಕಂಡುಬರುತ್ತದೆ ಆದರಲ್ಲಿ ವೀರಶೈವಮತವು ಕೇವಲ ಅನಾದಿಯಾಗದಲ ಸ್ವಾತಂತ್ರ್ಯದಿಂದ ಕೂಡಿದ ಅನಾದಿತ್ವವನ್ನು ಪಂಡಿತ ಗೌರೀನಾಥ ಶಾಸ್ತ್ರಿಗಳವರು ಅನೇಕ ಪ್ರಮಾಣಗಳಿಂದ ಪಂಡಿತರ ಮನವೊಲಿಯುವಂತೆ ಪ್ರತಿಪಾದಿಸಿರುವರು ಇದೂ ಅಲ್ಲದೆ, ವೀರಶೈವ ಮತವು ವಿಶಾಲಭಾವನೆಗೆಡೆಗೊಟ್ಟುದದರಿಂದ ಈ ಮತವು ಜಾತ್ಯತೀತ ಧರ್ಮವೆಂಬುವ ವಿಷಯವನ್ನು ಶಾಸ್ತ್ರಿಗಳವರು ವೈದಿಕ ಮತ್ತು ತಾಂತ್ರಿಕ ಪ್ರಮಾಣಗಳ ಮಾಲಿಕೆ

ಯಿಂದ ಮನೋಹರವಾಗಿಯೂ, ತಾತ್ವಿಕವಾಗಿಯೂ ವಿವೇಚನೆ ಮಾಡಿದ್ದು ಅತ್ಯಂತ ಪ್ರಶಂಸನೀಯವು ಸರ್ವರೂ ಒಪ್ಪತಕ್ಕ ಸಂಗತಿಯು

ಈ ಗ್ರಂಥವು ಚಿಕ್ಕದಾದರೂ ಇದರಲ್ಲಿ ಪ್ರತಿಪಾದಿತ ವಿಷಯವು ವ್ಯಾಪಕವು ಮತ್ತು ಗಹನವು ಆಗಿರುತ್ತದೆ ಒಟ್ಟಿನ ಮೇಲೆ ವೀರಶೈವವು ವಿಶ್ವಧರ್ಮವೆಂದು ಈ ಗ್ರಂಥದಿಂದ ಮನವರಿಕೆಯಾಗುವದು ಅದರಂತೆ ವಿಶ್ವವ್ಯಾಪಕವಾಗುವ ಪ್ರಯತ್ನವನ್ನು ಧರ್ಮಾಭಿಮಾನಿಗಳಾದ ಸರ್ವರೂ ಕೈಕೊಳ್ಳತಕ್ಕದ್ದು ಅತ್ಯಂತ ಅವಶ್ಯವಿದೆ ಕಾರಣ ಯಾವತ್ತೂ ವೀರಶೈವ ಬಾಂಧವರು ಈ ಮಹತ್ಕೃತಿಯ ಪ್ರಯೋಜನವನ್ನು ಹೊಂದಿದರೆ ಮಾತ್ರ ಶಾಸ್ತ್ರಿಗಳ ಪ್ರಯತ್ನದ ಫಲವು ಸಫಲವಾಗುವದರಲ್ಲಿ ಸಂದೇಹವಿಲ್ಲ

೧೫—೮—೧೯೫೭



# ಈ ಗ್ರಂಥಕ್ಕೆ ಪ್ರೋತ್ಸಾಹಿಸಿದ ದಾನಿಗಳ
# ಧನಸಹಾಯಕ ಪತ್ರ



ಶ್ರೀ ಮ ನಿ ಪ್ರ ಅನ್ನದಾನಿ ಮಹಾಸ್ವಾಮಿಗಳು, ಹಾಲಕೆರೆ (ಜಿ ಧಾರವಾಡ)
ಶ್ರೀ ಮ ನಿ ಪ್ರ ಮಹಾಂತಸ್ವಾಮಿಗಳು, ಇಲಕಲ್ಲ (ಜಿ ಬಿಜಾಪೂರ)
ಶ್ರೀ ಮ ನಿ ಪ್ರ ಹಾನಗಲ್ ಸದಾಶಿವಸ್ವಾಮಿಗಳು, ಶಿವಯೋಗಮಂದಿರ
(ಜಿ ಬಿಜಾಪೂರ)
ಶ್ರೀ ಮ ನಿ ಪ್ರ ಸಿದ್ಧರಾಮಸ್ವಾಮಿಗಳು ಚಿಕ್ಕಸುಗೂರು (ಜಿ ರಾಯಚೂರ
ವೇ ಬಸವಲಿಂಗಯ್ಯನವರು ಅಂದಾನಯ್ಯನವರು ಮಠ ರಾಜೂರು
(ಜಿ ಧಾರವಾಡ)

ಮ ರಾ ನಾಗಪ್ಪನವರು ಗಾಂಜಿ ರಾಜೂರು ,,
ಮ ರಾ ಚನವೀರಪ್ಪನವರು ಮಳಗಿ ರಾಜೂರು ,,
ಮ ರಾ ಸೂಗಪ್ಪನವರು ಚಳಿಗೇರಿ, ರಾಜೂರು ,,
ಮ ರಾ ಇತರೆ ಸಮಸ್ತ ದೈವದವರು ರಾಜೂರು ,,
ವೇ|| ವೀರೂಪಾಕ್ಷಯ್ಯನವರು ಜುಕ್ತಿ ಹಿರಿಮಠ, ಸೂಡಿ ,,
ಮ ರಾ ಗುಂಡಪ್ಪನವರು ಸಂಗಪ್ಪನವರು ಪಟ್ಟಣಶೆಟ್ಟಿ, ,, ,,
ರಾವಸಾಹೇಬ ಗುರುಸಿದ್ಧಪ್ಪನವರು ಶೆಟ್ಟರ, ,, ,,
ಮ ರಾ ಚೋಳಪ್ಪನವರು ಕಂಬಳಿ, ,, ,,
ಮ ರಾ ಇತರ ಸಮಸ್ತ ದೈವದರು, ,, ,,
ವೇ|| ಮೂ|| ಲಿಂಗರಾಜ ವೈದ್ಯರು ಗವಿಮಠ ಕೊಪ್ಪಳ
ಶ್ರೀಮಂತ ಶಂಕರಪ್ಪ ದೇಸಾಯಿಯವರು ಗುಡಗುಂಟಿ, ವ್ಯಾಗೇರಿ
(ಕೊಪ್ಪಳ ತಾಲೂಕ)



# ಈ ಗ್ರಂಥಕ್ಕೆ ಪ್ರೋತ್ಸಾಹಿಸಿದ ದಾನಿಗಳ
# ಧನಸಹಾಯಕ ಪತ್ರ



ಶ್ರೀ ಷ ಬ್ರ ಗುರುಲಿಂಗ ಶಿವಾಚಾರ್ಯ ಪಟ್ಟದಸ್ವಾಮಿಗಳು, ಹಿರಿಮಠ
ಕಲಾದಗಿ (ಜಿ ಬಿಜಾಪೂರ)

ಶ್ರೀ ಷ ಬ್ರ ಶಿವಲಿಂಗ ಶಿವಾಚಾರ್ಯ ಸ್ವಾಮಿಗಳು ಸಂಸ್ಥಾನಮಠ,
ವಡಸಲಗಿ ಇತರ ಸಮಸ್ತದೈವದವರು (ಜಿ ಗುಲ್ಬುರ್ಗಾ)

ತ್ರಿಕಾಲ ಪೂಜಾನಿಷ್ಠರೂ ದಾಸೋಹ ಮೂರ್ತಿಗಳೂ, ಆದ ಶ್ರೀಮಾನ್
ದೊಡ್ಡಪ್ಪ ಅಪ್ಪ ಅವರು ಶ್ರೀಶರಣಬಸವೇಶ್ವರ ಸಂಸ್ಥಾನ
ಕಲಬುರ್ಗಿ ( ಜಿ ಗುಲ್ಬುರ್ಗಾ )

ಮ ರಾ ರಾಮನಗೌಡರು ಬಸನಗೌಡರು ಪೋಲೀಸ ಪಾಟೀಲ
ಹೂಲಿಗೇರಿ (ಜಿ ರಾಯಚೂರ)

ಮ ರಾ ಬಸನಗೌಡರು ವೆಂಕನಗೌಡರು, ಹೂಲಿಗೇರಿ ,,

ಮ ರಾ ಮಾಂತಪ್ಪನವರು ವರಪ್ಪನವರು ಕರಡಿ, ಹೂಲಿಗೇರಿ ,,

ಮ ರಾ ಇತರ ಸಮಸ್ತದೈವದವರು, ,, ,,

ಮ ರಾ ಗೌಡರ ಮೂರೂ ಮನೆತನದವರು, ಕಡೂರ ,,

ಮ ರಾ ಚೆನಮಲ್ಲಪ್ಪ ಸಂಗಪ್ಪ ಹವಾಲದಾರ, ಕಾಟಾಪೂರ ,,

ಮ ರಾ ವೀರಪ್ಪ ಅಯ್ಯಪ್ಪ ಶೆಟ್ಟರ ,, ,,

ಮ ರಾ ಬಸವನಗೌಡರು ಕಾಟಾಪುರ-ಕರೋಡಗಿರಿ ನಾಕೇದಾರ
ಚಳಗೇರಿ, ಕಾಟಾಪೂರ ,,

ಮ ರಾ ಇತರ ಸಮಸ್ತ ದೈವದವರು ,, ,,



# ಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೬ | ಜಾತ್ಯಾತೀತ | ಜಾತ್ಯತೀತ |
| ೧ | ೧೦ | ಜಾತ್ಯಾತೀತ | ಜಾತ್ಯತೀತ |
| ೨ | ೧೨ | ಜಾತ್ಯಾತೀತ | ಜಾತ್ಯತೀತ |
| ೪ | ೩ | ಸಂಭೂತವಾವ | ಸಂಭೂತವಾವ |
| ೪ | ೩ | ಹೇಳ | ೦ |
| ೪ | ೧೨ | ಗಳಾಗಿದ್ದು | ಗಳಾಗಿವೆ |
| ೪ | ೧೪ | ಶಿದ್ಧಾಂತ | ಸಿದ್ಧಾಂತ |
| ೫ | ೧೫ | ವಿದ್ಯಾಗಮ | ದಿವ್ಯಾಗಮ |
| ೮ | ೮ | ಸಿದ್ಧಂ | ಸಿದ್ಧಿಂ |
| ೮ | ೯ | ಬ್ರಹಮ | ಬ್ರಹ್ಮ |
| ೮ | ೧೩ | ತದುಕ್ರಂ | ತದುಕ್ತಂ |
| ೮ | ೨೪ | ಕತೃಕ | ಕರ್ತೃಕ |
| ೯ | ೯ | ಕೃಚಿದಪಿ | ಕ್ವಚಿದಪಿ |
| ೧೧ | ೨೨ | ಮುಖೋಧ್ವ | ಮುಖೋರ್ಧ್ವ |
| ೧೨ | ೫ | ಮೂಢಾಧ್ಮಾ | ಮೂಢಾತ್ಮಾ |
| ೧೨ | ೧೦ | ವೆಡೆಯೇ | ವೆಡೆಯ |
| ೧೩ | ೧೪ | ವೇದ | ವೇದಾ |
| ೧೪ | ೮ | ಅವರ ಧರ್ಮ | ಅಪರ ಧರ್ಮ |
| ೧೫ | ೬ | ಪುಟಗಳಲ್ಲಿ | ಪಟಲದಲ್ಲಿ |
| ೧೫ | ೧೦ | ಶ್ರುಯತೇ | ಶ್ರೂಯತೇ |
| ೧೫ | ೧೧ | ಇತೀ | ಇತಿ |
| ೧೫ | ೧೫ | ಕಾಣದಹುದಾಗಿದೆ | ಕಾಣಬಹುದಾಗಿದೆ |
| ೧೬ | ೩ | ಮೋದುವನು | ನೋಡುವನು |

| ಪು. | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೬ | ೧೭ | ಕಾಂಕ | ಕಾರಿಕ |
| ೧೭ | ೨೦ | ಶ್ಯವರಿಗನು | ಶ್ರೈವಾಗಸು |
| ೧೭ | ೨೧ | ಯಾಕಂದರೆ | ಯಾಕಂದರೆ ಇದು |
| ೧೭ | ೨೨ | ಮಾಲಾಗಿದೆ | ಮಾತಾಗಿದೆ |
| ೧೮ | ೨೪ | ಷಟಸ್ಥಲ | ಷಟ್ಸ್ಥಲ |
| ೨೦ | ೩ | ಪಟದಲ್ಲಿ | ಪಟಲದಲ್ಲಿ |
| ೨೧ | ೨೪ | ಶ್ರೀನುನ್ಮಂತೋ | ಶ್ರೀಮನ್ಮರಿತೋಂ |
| ೨೪ | ೫ | ಪ್ರುಟ | ಪಟಲ |
| ೨೫ | ೧೧ | ವಿವ್ಯಾಂ | ವಿದ್ಯಾಂ |
| ೨೭ | ೨೦ | ಅತ್ಯವಕ್ಯ | ಅತ್ಯವಶ್ಯ |
| ೨೮ | ೮ | ತತ್ಯಂತತಿ | ತತ್ಸಂತತಿ |
| ೨೮ | ೯ | ಗಳಂನು | ಗಳಿಂದು |
| ೨೮ | ೧೧ | ಗೋತ್ರಾಧಿಕಾರಣಃ | ಗೋತ್ರಾಧಿಕಾರಿಣಃ |
| ೨೮ | ೨೮ | ರಾಶ್ವಪಂಡಿತಃ | ರಾಮಶ್ವಪಂಡಿತಃ |
| ೨೯ | ೨೨ | ಶ್ರುತಿ | ಶ್ರುತಿ |
| ೩೦ | ೨ | ಶಕ್ತ್ಯೋಹ್ಯಂ | ಶಕ್ತ್ಯೋಕ್ಯ |
| ೩೦ | ೨೮ | ಪ್ರರಾಣಾ | ಪುರಾಣಾ |
| ೩೧ | ೨ | ಸನಿಚೋಡ | ಸನ್ನಿಚೋಡ |
| ೩೪ | ೨೮ | ಆವ್ರಾಕೃತ | ಆವ್ರಾಕೃತ |
| ೩೫ | ೧೭ | ವೀರಶೈವ | ವೀರಶೈವ |
| ೩೯ | ೨ | ಪ್ರುಟದಲ್ಲಿ | ಪಟಲದಲ್ಲಿ |
| ೪೩ | ೨೧ | ಕಾವ್ರುದಿಲ್ಲ | ಆಗುವ್ರುದಿಲ್ಲ |
| ೪೭ | ೧೪ | ಷಟ | ಷಟ್ |
| ೪೯ | ೨೩ | ಆಕ್ಷೇಪಿಸ | ಆಕ್ಷೇಪಿಸಿ |
| ೫೦ | ೧೨ | ನಾಶ್ರಮಾನ ಸರ್ವಾನ್ | ನಾಶ್ರಮಾನ್ಸರ್ವಾನ |
| ೫೦ | ೧೪ | ಸ್ಮೃತಾಃ | ಸ್ಮೃತಾಃ । |
| ೫೧ | ೧೧ | ನಾದಕ | ಸಾದಕ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೫೩ | ೧೦ | ಇತ್ಯರ್ಥ್ಯ | ಇತ್ಯರ್ಥ |
| ೫೪ | ೨೧ | ಅರ್ಹವಾ | ಅರ್ಹನಾ |
| ೫೫ | ೨೦ | ಎಮಾಣ | ಪ್ರಮಾಣ |
| ೫೬ | ೩ | ಅನ್ಯೇಷಾ | ಅನ್ವೇಷಾಂ |
| ೫೬ | ೭ | ಸಾಹಿತ್ಯನುವಾದ | ಸಾಹಿತ್ಯಾನುವಾದ |
| ೫೬ | ೧೫ | ೧೩೫೦ | ೧೫೩೦ |
| ೫೭ | ೬ | ಮಿತ್ರರತ್ | ಮಿತರರತ್ |
| ೫೮ | ೨೨ | ವೇಳ್ಯವನಲಾ | ವೇಳ್ವವದನಲಾ |
| ೫೯ | ೨೩ | ವೀರಶೈವ ಕ್ರ ಮ ದ | ವೀರಶೈವಕ್ರಮಂ |
| ೬೦ | ೨ | ಬಾಷ್ಯೋದಾಹುತ | ಬಾಷ್ಯೋದಾಹೃತ |
| ೬೦ | ೩ | ಪುರಾಣ | ಪುರಾ |
| ೬೦ | ೬ | ಸಿದ್ಧಿಲ | ಸಿದ್ಧಿ |
| ೬೦ | ೪ | ಮಕ್ಕು | ನುಕ್ಕುಂ |
| ೬೩ | ೨೧ | ಸಂಜ್ಞ | ಸಂಜ್ಞಿ |
| ೬೪ | ೧೨ | ಸರಂ | ಸರಾಃ |
| ೬೪ | ೨೧ | ವಿಷ್ಯವು | ವಿಷ್ಯವು |
| ೬೫ | ೩ | ಮಾಹೇಶ್ವರಲ್ಲಿ | ಮಾಹೇಶ್ವರರಲ್ಲಿ |
| ೬೫ | ೧೦ | ಮೇಗಿಂಪೇ | ಹಿಂಗಿಂಪೇ |



# ಶ್ರೀ ಗೌರೀನಾಥ ಗ್ರಂಥಮಾಲೆಯ

— ಪ್ರಥಮ ಪುಷ್ಪ —

೧. ವೀರಶೈವ ಶುದ್ಧೀಕರಣ

(ಸುಧಾರಿಸಿದ ೨ನೇ ಆವೃತ್ತಿ ಅಚ್ಚಿನಲ್ಲಿದೆ)

— ದ್ವಿತೀಯ ಪುಷ್ಪ —

೨. ಸ್ವಾತಂತ್ರ್ಯದ ಅನಾದಿತ್ವ ಅಥವಾ ವೈದಿಕ ತಾಂತ್ರಿಕ ರಹಃ

— ತೃತೀಯ ಪುಷ್ಪ —

೩. ವೀರಶೈವ ಷಟ್‌ಸ್ಥಲ ಬ್ರಹ್ಮದೀಪಿಕೆ

(ಸೋಸಲೇ ರೇವಣಾರಾಧ್ಯ ಕೃತ) ಇದು ವೇದಾಗಮೋಪನಿಷದಾದಿ ಕ್ರೋಡೀಕೃತ ಸಂಸ್ಕೃತ ಗ್ರಂಥ. ಮರುಳಸಿದ್ಧ ಯತಿರಾಜರಿಂದ ಬರೆಯಲ್ಪಟ್ಟ ಸರಳಗನ್ನಡ ವ್ಯಾಖ್ಯಾನದೊಂದಿಗೆ (ಅಚ್ಚಿನಲ್ಲಿದೆ)

ಈ ಗ್ರಂಥಗಳು ದೊರೆಯುವ ವಿಳಾಸ:—

**ಉಮಾಪತಿ ಶಾಸ್ತ್ರಿ, ಬಿ. ಎ.,**
ಶಿವಯೋಗ ಮಂದಿರ (ತಾ ಬದಾಮಿ)

**ಗುರುಪಾದಪ್ಪ ಶಂಕರಪ್ಪ ಇಲಾಳಶೆಟ್ರ,**
ಅಡತಿ ಅಂಗಡಿ, ಬಾಗಲಕೋಟೆ

**ಜಿ. ಎಚ್. ಚನ್ನಪ್ಪ ಬುಕ್ಕ-ಸೆಲ್ಲರ**
ಬಾಗಲಕೋಟೆ



# ಈ ಗ್ರಂಥಕ್ಕೆ ಪ್ರೋತ್ಸಾಹಿಸಿದ ದಾನಿಗಳ
# ಧನಸಹಾಯಕ ಪತ್ರ



ಶ್ರೀ ಷ ಬ್ರ ಗುರುಲಿಂಗ ಶಿವಾಚಾರ್ಯ ಪಟ್ಟದಸ್ವಾಮಿಗಳು, ಹಿರಿಮಠ
ಕಲಾದಗಿ (ಜಿ ಬಿಜಾಪೂರ)

ಶ್ರೀ ಷ ಬ್ರ ಶಿವಲಿಂಗ ಶಿವಾಚಾರ್ಯ ಸ್ವಾಮಿಗಳು ಸಂಸ್ಥಾನಮಠ,
ಪಡಸಲಗಿ ಇತರ ಸಮಸ್ತದೈವದವರು (ಜಿ ಗುಲ್ಬುರ್ಗಾ)

ತ್ರಿಕಾಲ ಪೂಜಾನಿಷ್ಠರೂ ದಾಸೋಹ ಮೂರ್ತಿಗಳೂ, ಆದ ಶ್ರೀಮಾನ್
ದೊಡ್ಡಪ್ಪ ಅಪ್ಪ ಅವರು ಶ್ರೀಶರಣಬಸವೇಶ್ವರ ಸಂಸ್ಥಾನ
ಕಲಬುರ್ಗಿ. ( ಜಿ ಗುಲ್ಬುರ್ಗಾ )

ಮ ರಾ. ರಾಮನಗೌಡರು ಬಸನಗೌಡರು ಪೋಲೀಸ ಪಾಟೀಲ
ಹೂಲಿಗೇರಿ (ಜಿ ರಾಯಚೂರ)

ಮ ರಾ ಬಸನಗೌಡರು ವೆಂಕನಗೌಡರು, ಹೂಲಿಗೇರಿ ,,

ಮ ರಾ ಮಾಂತಪ್ಪನವರು ಪರಪ್ಪನವರು ಕರಡಿ, ಹೂಲಿಗೇರಿ ,,

ಮ. ರಾ ಇತರ ಸಮಸ್ತದೈವದವರು, ,, ,,

ಮ. ರಾ ಗೌಡರ ಮೂರೂ ಮನೆತನದವರು, ಕಡೂರ ,,

ಮ ರಾ ಚೆನಮಲ್ಲಪ್ಪ ಸಂಗಪ್ಪ ಹವಾಲದಾರ, ಕಾಟಾಪೂರ ,,

ಮ ರಾ ಪರಪ್ಪ ಅಯ್ಯಪ್ಪ ಶೆಟ್ಟರ ,, ,,

ಮ ರಾ. ಬಸವನಗೌಡರು ಕಾಟಾಪುರ ಕರೋಡಗಿರಿ ನಾಕೇದಾರ
ಚಳಗೇರಿ, ಕಾಟಾಪೂರ. ,,

ಮ ರಾ ಇತರ ಸಮಸ್ತ ದೈವದವರು ,, ,,

# ಶುದ್ಧಿ ಪತ್ರಿಕೆ

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧ | ೬ | ಜಾತ್ಯಾತೀತ | ಜಾತ್ಯತೀತ |
| ೧ | ೧೦ | ಜಾತ್ಯಾತೀತ | ಜಾತ್ಯತೀತ |
| ೨ | ೧೨ | ಜಾತ್ಯಾತೀತ | ಜಾತ್ಯತೀತ |
| ೪ | ೩ | ಸಂಭೂತವಾವ | ಸಂಭೂತವಾದ |
| ೪ | ೩ | ಹೇಳ | ೦ |
| ೪ | ೧೨ | ಗಳಾಗಿದ್ದು | ಗಳಾಗಿವೆ |
| ೪ | ೧೪ | ಶಿದ್ಧಾಂತ | ಸಿದ್ಧಾಂತ |
| ೫ | ೧೫ | ವಿದ್ಯಾಗಮು | ದಿವ್ಯಾಗಮು |
| ೮ | ೮ | ಸಿದ್ಧಂ | ಸಿದ್ಧಿಂ |
| ೮ | ೯ | ಬ್ರಹಮ | ಬ್ರಹ್ಮ |
| ೮ | ೧೩ | ತದುಕ್ರಂ | ತದುಕ್ತಂ |
| ೮ | ೨೪ | ಕತೃಕ | ಕರ್ತೃಕ |
| ೯ | ೯ | ಕೃಚಿದಪಿ | ಕ್ವಚಿದಪಿ |
| ೧೧ | ೨೨ | ಮುಖೋಧ್ವ | ಮುಖೋರ್ಧ್ವ |
| ೧೨ | ೫ | ಮೂಢಾಧ್ಮಾ | ಮೂಢಾತ್ಮಾ |
| ೧೨ | ೧೦ | ವೆಡೆಯೇ | ವೆಡೆಯ |
| ೧೩ | ೧೪ | ವೇದ | ವೇದಾ |
| ೧೪ | ೮ | ಅವರ ಧರ್ಮ | ಅಪರ ಧರ್ಮ |
| ೧೫ | ೬ | ಪುಟ[illegible]ಲ್ಲಿ | ಪಟಲದಲ್ಲಿ |
| ೧೫ | ೧೦ | ಶ್ರುಯತೇ | ಶ್ರೂಯತೇ |
| ೧೫ | ೧೧ | ಇತೀ | ಇತಿ |
| ೧೫ | ೧೫ | ಕಾಣದಹುದಾಗಿದೆ | ಕಾಣಬಹುದಾಗಿದೆ |
| ೧೬ | ೩ | ಮೋದುವನು | ನೋಡುವನು |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೧೬ | ೧೬ | ಕಾಂಕ | ಕಾರಿಕ |
| ೧೬ | ೨೦ | ಸ್ತ್ರಪರಿಗೆಪು | ಸ್ತೃವಾಗೆಪು |
| ೧೬ | ೨೧ | ಯಾಕಂದರ | ಯಾಕೆಂದರೆ ಇದು |
| ೧೬ | ೨೨ | ಮಾಲಾಗಿದ | ಮಾತಾಗಿದೆ |
| ೧೭ | ೨೪ | ಷಟಸ್ಥಲ | ಷಟ್‌ಸ್ಥಲ |
| ೨೦ | ೩ | ಪಟದಲ್ಲಿ | ಪಟಲದಲ್ಲಿ |
| ೨೧ | ೨೪ | ಶ್ರೀಮನ್ಮಂತೋ | ಶ್ರೀಮನ್ಮರಿತೋಂ |
| ೨೪ | ೫ | ಶ್ರುಟ | ಪಟಲ |
| ೨೫ | ೧೦ | ವಿದ್ಯಾಂ | ವಿದ್ಯಾಂ |
| ೨೬ | ೨೦ | ಅತ್ರವಕ್ಯ | ಅತ್ಯವಶ್ಯ |
| ೨೭ | ೮ | ತತ್ಯಂತತಿ | ತತ್ಸಂತತಿ |
| ೨೮ | ೯ | ಗಳಿಂಮ | ಗಳಿಂದು |
| ೨೮ | ೧೧ | ಗೋತ್ರಾಧಿಕಾರಣಃ | ಗೋತ್ರಾಧಿಕಾರಿಣಃ |
| ೨೮ | ೨೪ | ರಾಶ್ವಪಂಡಿತಃ | ರಾಮುಶ್ಚಪಂಡಿತಃ |
| ೨೯ | ೨೨ | ಶ್ರತಿ | ಶ್ರುತಿ |
| ೩೦ | ೨ | ಶಕ್ತ್ಯೋಹ್ಯಂ | ಶಕ್ತ್ಯೋಹ್ಯ |
| ೩೦ | ೨೪ | ಪುರಾಣ | ಪುರಾಣ |
| ೩೧ | ೭ | ಸನಿಚೋಡ | ಸನ್ನಿಚೋಡ |
| ೩೪ | ೨೪ | ಆಪ್ರಾಕೃತ | ಅಪ್ರಾಕೃತ |
| ೩೫ | ೧೭ | ವೀರಶೈವ | ವೀರಶೈವ |
| ೩೯ | ೨ | ಶ್ರುಟವಲ್ಲಿ | ಪಟಲದಲ್ಲಿ |
| ೪೩ | ೨೧ | ಳಾವುದಿಲ್ಲ | ಳಾಗುವುದಿಲ್ಲ |
| ೪೬ | ೧೪ | ಷಟ | ಷಟ್ |
| ೪೯ | ೨೩ | ಆಕ್ಷೇಪಿಸ | ಆಕ್ಷೇಪಿಸಿ |
| ೫೦ | ೧೨ | ನಾಶ್ರಮಾನ ಸರ್ವಾಣ್ | ನಾಶ್ರಮಾನ್ಸರ್ವಾಣ |
| ೫೦ | ೧೦ | ಸ್ಮ್ರತಾಃ | ಸ್ಮೃತಾಃ |
| ೫೧ | ೧೧ | ಸಾದಕ | ಸಾಧಕ |

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೫೨ | ೧೦ | ಇತ್ಯಥ್ಯ | ಇತ್ಯರ್ಥ |
| ೫೪ | ೨೧ | ಅಪರ್ಣಾ | ಅರ್ಹಣಾ |
| ೫೫ | ೨೦ | ಎಮಾಣ | ಪ್ರಮಾಣ |
| ೫೬ | ೩ | ಅನ್ವೇಷಾ | ಅನ್ವೇಷಾಂ |
| ೫೮ | ೯ | ಸಾಹಿತ್ಯನುವಾಧ | ಸಾಹಿತ್ಯಾನುವಾದ |
| ೫೭ | ೧೫ | ೧೩೫೦ | ೧೫೩೦ |
| ೫೯ | ೬ | ಬುತ್ರರತ್ | ಪುತ್ರರತ್ |
| ೫೯ | ೨೨ | ಪೇಳ್ವಪನಲಾ | ಪೇಳ್ವಪದನಲಾ |
| ೫೯ | ೨೩ | ವೀರಶೈವ ಕ್ರ. ವು. ದ. | ವೀರಶೈವಕ್ರಮಂ |
| ೬೦ | ೨ | ಬಾಷ್ಯೋದಾಹುತ | ಭಾಷ್ಯೋದಾಹೃತ |
| ೬೦ | ೩ | ಪುರಾಣ | ಪುರಾ |
| ೬೦ | ೬ | ಸಿದ್ಧಿಲ | ಸಿದ್ಧಿ |
| ೬೦ | ೮ | ಮುಕ್ತ್ಯ | ಮುಕ್ತ್ಯಂ |
| ೬೩ | ೨೧ | ಸಂಜ್ಞ | ಸಂಜ್ಞಿ |
| ೬೪ | ೧೨ | ನರಃ | ನರಾಃ |
| ೬೪ | ೨೧ | ವಿದ್ಯವ್ | ಘಧ್ಯವು |
| ೬೫ | ೩ | ಮಾಹೇಶ್ವರಲ್ಲಿ | ಮಾಹೇಶ್ವರದಲ್ಲಿ |
| ೬೫ | ೧೦ | ಹೇಗೆಯೇ | ಹೀಗೆಯೇ |

---

# ನಮ್ಮ ಡಿಪೋದಲ್ಲಿ ಸಿಗತಕ್ಕ ನಾಟಕ ಪುಸ್ತಕಗಳು

## ನಮ್ಮ ಸ್ವಂತ ನಾಟಕಗಳು

| | ರೂ | ಆ |
|---|---|---|
| ಸಂಪೂರ್ಣ ಪ್ರೇಮರಡ್ಡಿ ಮಲ್ಲಮ್ಮ | ೧ | ೮ |
| ವಾಲೀಕಂಪ್ರ ನಾಟಕ ) ಗಂಗಾಧರ | ೧ | ೮ |
| ಪ್ರೇಮಜ್ಯೋತಿ ,, ( ಶಾಸ್ತ್ರಿ | ೧ | ೮ |
| ಕರ್ಣಾನ ,, ) ಕೃತ | ೧ | ೮ |
| ಅಕ್ಕಮಹಾದೇವಿ ನಾಟಕ | ೧ | ೮ |
| ಕರ್ಮಪ್ರಕಾಶ ನಾಟಕ | | |
| ...ನಾ ಪೂಜಾರ ಕೃತ | ೧ | ೮ |
| ಮೊಂಡ ಗಂಡ ತುಂಟ ಹೆಂಡತಿ ನಾಟಕ | ೧ | ೮ |
| ಟೀಪುಸುಲ್ತಾನ ನಾಟಕ | ೧ | ೮ |
| ಮಾಂಗಲ್ಯ ಮಹಿಮೆ ನಾಟಕ | ೧ | ೮ |

## ಇತರ ನಾಟಕಗಳು

| | | |
|---|---|---|
| ಜೈಹಿಂದ ನಾಟಕ | ೧ | ೮ |
| ಹರಿಶ್ಚಂದ್ರ ನಾಟಕ | ೧ | ೮ |
| ಸಂಪೂರ್ಣ ರಾಮಾಯಣ ನಾಟಕ | ೨ | ೦ |
| ನರರಾಕ್ಷಸೀ ಅಥವಾ ಹೆಣ್ಣಿನ ಹಂಬಲ ನಾಟಕ | ೨ | ೦ |
| ಕಿತ್ತೂರ ಕೇಸರಿ ನಾಟಕ | ೧ | ೮ |
| ಕಿತ್ತೂರ ಚೆನ್ನಮ್ಮ ನಾಟಕ | ೨ | ೦ |
| ಬ್ಲ್ಯಾಕ ಮಾರ್ಕೆಟ ನಾಟಕ | ೧ | ೦ |
| ಭೂಕೈಲಾಸ ನಾಟಕ | ೧ | ೬ |
| ಝಾಂಸಿ ರಾಣಿ ಲಕ್ಷ್ಮೀಬಾಯಿನಾಟಕ | ೧ | ೮ |
| ದಶಾವತಾರ ನಾಟಕ | ೧ | ೮ |
| ಶ್ರೀ ಬಸವೇಶ್ವರ ನಾಟಕ | ೧ | ೮ |
| ಬೆಳವಡಿ ಮಲ್ಲಮ್ಮ ನಾಟಕ | ೧ | ೮ |
| ಕುರುಕ್ಷೇತ್ರ ನಾಟಕ | ೧ | ೮ |
| ಶನಿಪ್ರಭಾವ ನಾಟಕ | ೧ | ೬ |
| ಪಾರ್ವತಿ ಸತ್ವಪರೀಕ್ಷಾ ನಾಟಕ | ೧ | ೮ |
| ಕೃಷ್ಣಾರ್ಜುನರ ಯುದ್ಧ ನಾಟಕ | ೧ | ೮ |
| ಪ್ರಪಂಚ ಪರೀಕ್ಷಾ ನಾಟಕ | ೧ | ೮ |
| ಸತಿ ಅನುಸೂಯಾ ನಾಟಕ | ೧ | ೮ |
| ಅಕ್ಷಯಾಂಬರ ನಾಟಕ | ೧ | ೮ |
| ಚಿತ್ರಾಂಗದ ನಾಟಕ | ೧ | ೮ |
| ವೇಶ್ಯೆಯ ಬಾಳು ನಾಟಕ | ೧ | ೮ |
| ಧೃವಾವತಾರ ನಾಟಕ | ೧ | ೮ |
| ಸಿದ್ಧರಾಮೇಶ್ವರ ನಾಟಕ | ೧ | ೮ |
| ನಮ್ಮ ಭಾಗ್ಯೋದಯ ನಾಟಕ | ೧ | ೦ |
| ಸಿಂಧೂರ ಲಕ್ಷ್ಮಣ ನಾಟಕ | ೧ | ೮ |
| ಭಕ್ತಪ್ರಲ್ಹಾದ ನಾಟಕ | ೧ | ೮ |
| ಮಾತಂಗಕನ್ಯಾ ನಾಟಕ | ೧ | ೧೨ |
| ಬಡತನದ ಭೂತ ನಾಟಕ | ೧ | ೮ |
| ಬಾಣಸಿಗ ಭೀಮ ನಾಟಕ | ೧ | ೧೨ |
| ರಕ್ತರಾತ್ರಿ ನಾಟಕ | ೧ | ೧೨ |
| ಅಮರ ಗಾಂಧೀಜಿ ನಾಟಕ | ೧ | ೮ |
| ಬಾಜೀರಾವ ಪೇಶ್ವೆ ನಾಟಕ | ೧ | ೮ |
| ಜೀವನ ಸಂಗೀತ ನಾಟಕ | ೧ | ೮ |
| ಸಾಧ್ವೀ ಸಖೂಬಾಯಿ ನಾಟಕ | ೧ | ೪ |
| ಹದಗೆಟ್ಟ ಹೈದ್ರಾಬಾದ ನಾಟಕ | ೧ | ೮ |
| ರಾಜದ್ರೋಹ ನಾಟಕ | ೧ | ೪ |
| ಹಳ್ಳಿಯ ಹುಡುಗಿ ನಾಟಕ | ೧ | ೮ |
| ಉಷಾ ಸ್ವಯಂವರ ನಾಟಕ | ೧ | ೮ |
| ಸ್ತ್ರೀ ನಾಟಕ | ೨ | ೦ |
| ವೀರ ಅಭಿಮನ್ಯು ನಾಟಕ | ೧ | ೮ |
| ಪಾದುಕಾ ಪಟ್ಟಾಭಿಷೇಕ ನಾಟಕ | ೧ | ೮ |
| ಪಾಣಿಗ್ರಹಣ ನಾಟಕ | ೧ | ೮ |
| ಕಡ್ಡಿಮುಟ್ಟಿ ಸ್ಟೇಶನ್ ಮಾಸ್ತರ ನಾಟಕ | ೧ | ೮ |
| ದ್ರೌಪದಿ ವಸ್ತ್ರಾಪಹರಣ ನಾಟಕ | ೧ | ೮ |

**ದೊರೆಯುವ ಸ್ಥಳ—**

**ಜಿ. ಎಚ್. ಚನ್ನಪ್ಪ ಬುಕ್ಕ-ಸೆಲ್ಲರ, ಬಾಗಲಕೋಟೆ**



# ಶ್ರೀ ಗೌರೀನಾಥ ಗ್ರಂಥಮಾಲೆಯು

— ಪ್ರಥಮ ಪುಷ್ಪ —

೧. ವೀರಶೈವ ಶುದ್ಧೀಕರಣ

(ಸುಧಾರಿಸಿದ ೨ನೇ ಆವೃತ್ತಿ ಅಚ್ಚಿನಲ್ಲಿದೆ)

— ದ್ವಿತೀಯ ಪುಷ್ಪ —

೨. ಸ್ವಾತಂತ್ರ್ಯದ ಅನಾದಿತ್ವ ಅಥವಾ ವೈದಿಕ ತಾಂತ್ರಿಕ ರಹಸ್ಯ

— ತೃತೀಯ ಪುಷ್ಪ —

೩. ವೀರಶೈವ ಷಟ್‌ಸ್ಥಲ ಬ್ರಹ್ಮದೀಪಿಕೆ

(ಸೋಸಲೇ ರೇವಣಾರಾಧ್ಯ ಕೃತ) ಇದು ವೇದಾಗಮೋಪನಿಷದಾದಿ ಕ್ರೋಢೀಕೃತ ಸಂಸ್ಕೃತ ಗ್ರಂಥ ಮರುಳಸಿದ್ಧ ಯತಿರಾಜರಿಂದ ಬರೆಯಲ್ಪಟ್ಟ ಸರಳಗನ್ನಡ ವ್ಯಾಖ್ಯಾನದೊಂದಿಗೆ (ಅಚ್ಚಿನಲ್ಲಿದೆ)

ಈ ಗ್ರಂಥಗಳು ದೊರೆಯುವ ವಿಳಾಸ:—

ಉಮಾಪತಿ ಶಾಸ್ತ್ರಿ, ಬಿ. ಎ.,
ಶಿವಯೋಗ ಮಂದಿರ (ತಾ. ಬದಾಮಿ)

ಗುರುಪಾದಪ್ಪ ಶಂಕರಪ್ಪ ಇಲಾಳಶೆಟ್ರ,
ಅಡತಿ ಅಂಗಡಿ, ಬಾಗಲಕೋಟೆ

ಜಿ. ಎಚ್. ಚೆನ್ನಪ್ಪ ಬುಕ್ಕ-ಸೆಲ್ಲರ
ಬಾಗಲಕೋಟೆ

